# ಸಿದ್ಧಗಂಗಾ


ಸಂಪುಟ–೨೦ ಸಂಚಿಕೆ-೬ ಜೂನ್, ೧೯೮೩


ಪವಿತ್ರಸ್ವಗಾತ್ರಂ ಬುಧಸ್ತೋತ್ರಪಾತ್ರಂ।
ನಿಕೃತ್ತಾವರೋಧಂ ನಿಸರ್ಗಾವಬೋಧಂ॥
ಚಿದಾಮೋದಭಾಜಂ ಚರಾಚಾರ್ಯರಾಜಂ।
ಮಹಾಲಿಂಗಸಂಗಂ ಭಜೇ ಸಿದ್ಧಲಿಂಗಂ ॥ ೭ ॥

ಜಿತಾರಾತಿವರ್ಗಂ ಗೃಹೀತಾದ್ಯಮಾರ್ಗಂ।
ತತಾಮ್ನಾಯಸಾರಂ ತಮಸ್ತೋಮದೂರಂ॥
ಪರಾಷಟ್ಸ್ಥಲಾಂಕಂ ನಿರಾತಂಕಶಂಕಂ।
ಮಹಾಲಿಂಗಸಂಗಂ ಭಜೇ ಸಿದ್ಧಲಿಂಗಂ ॥ ೮ ॥

ಭುಜಂಗಪ್ರಯಾತಂ ಸ್ತವಂ ಸಿದ್ಧಲಿಂಗಂ।
ಪ್ರಭೋರ್ಮೂಲಮಂತ್ರಾಭಿಧಾನೇನ ಕ್ಲುಪ್ತಂ॥
ಭುಜಂಗಾಶ್ರಮಸ್ಥಸ್ಯ ಯೋವಾ ಪಠೇ–।
ತ್ಸೋऽಪ್ಯವಾಪ್ನೋತ್ಯಭೀಷ್ಟಂ ಚ ಭೋಗಂ ಚ ಮೋಕ್ಷಂ॥ ೯ ॥

# ಈ ಸಂಚಿಕೆಯಲ್ಲಿ





# ಶ್ರೀವಾಣಿ

"ಮನುರ್ಭವ" ಮನುಷ್ಯನಾಗು–ಇದೊಂದು ವೇದವಿಹಿತ ಆದೇಶ. ಹಾಗಾದರೆ ಮನುಷ್ಯ ಎಂದರೇನು? ನಿಜವಾದ ಮನುಷ್ಯನಾರು? ಇದು ಸಾರ್ವತ್ರಿಕವಾದ ದೊಡ್ಡ ಪ್ರಶ್ನೆ. ಈ ಪ್ರಶ್ನೆಗೆ ಬಹು ಹಿಂದೆಯೇ ನಮ್ಮವರು ಉತ್ತರ ಕೊಟ್ಟಿದ್ದಾರೆ. "ಮನನಾತ್ ಮನುಷ್ಯಃ" ಎಂಬುದಾಗಿ. ಯಾವ ವ್ಯಕ್ತಿ ಮನನಶೀಲನಾಗಿ ಪರರ ಸುಖ–ದುಃಖ, ಹಾನಿ–ಲಾಭ, ಉನ್ನತಿ–ಅವನತಿಗಳನ್ನು ತನ್ನಂತೆಯೇ ಬಗೆಯುತ್ತಾನೆಯೋ, ಯಾವಾತ ಧರ್ಮ ರಕ್ಷಣೆಗಾಗಿ, ಬಂದ ದುಃಖವನ್ನನುಭವಿಸಲು, ಅಥವಾ ಪ್ರಾಣವನ್ನಾದರೂ ಅರ್ಪಿಸಲು ಸಿದ್ಧನಾಗಿರುತ್ತಾನೆಯೋ, ಅಭ್ಯುದಯ ನಿಶ್ರೇಯಸ್ಸುಗಳಿಗೆ ಕಾರಣವಾದ ಕರ್ತವ್ಯಗಳಲ್ಲಿ ತೊಡಗಿರುತ್ತಾನೆಯೋ ಅವನೇ ನಿಜವಾದ ಮನುಷ್ಯ. ಅದೇ ಮಾನವ ಧರ್ಮ, ಮನುಷ್ಯತ್ವ. ಇಂಥ ಮನುಷ್ಯತ್ವ ಸಂಪಾದನೆಗಾಗಿ ಲೋಕ ತೊಡಗಬೇಕು. ದೇವನಲ್ಲಿ ಮೊರೆಯಿಡಬೇಕು.

"ಲೋಕಸ್ಥಿತಾಂ ಮಾನವ ಜಾತಿ ಸರ್ವಾಂ
ಪಶ್ಯಾಮ್ಯಹಂ ಸೌಹೃದಲೋಚನೇನ ।
ಭವಂತಮಾವೇಕ್ಷ್ಯ ಬಿಭೇಮಿ ಪಾಪಾತ್
ನ ಪಾಪಕೃತ್ಯೇಷು ಭವೇತ್ ಪ್ರವೃತ್ತಿಃ ॥

"ಸಿದ್ಧಗಂಗಾ" ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104

ತುಮಕೂರು ಜಿಲ್ಲೆ.



**ಚಂದಾ ವಿವರ**

**ವಾರ್ಷಿಕ ಚಂದಾ 15-00 ರೂ**

**ಅಜೀವ ಸದಸ್ಯತ್ವ 151-00 ರೂ**

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಅಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.



# ಸಂಪಾದಕೀಯ

'ವಿದ್ಯಾದದಾತಿ ವಿನಯಂ' ಹೌದು; ವಿದ್ಯೆಯೆಂದರೇನು? ಯಾವ ರೀತಿಯಲ್ಲಿ ಇದನ್ನು ಸಂಪಾದಿಸಬೇಕು? ಎಂದು ಅರಿತು ಸಂಪಾದಿಸಿದವರ ಮಟ್ಟಿಗೆ ಈ ಮಾತು ನಿಜವಾಗಿರಬಹುದು. ಇಂದು ಈ ಮಾತು ಹಿರಿಯರನ್ನು ವಿಮಂಚನೆಗೊಳಗು ಮಾಡಿರುವಷ್ಟು ಎಂದೂ ಇದು ಮಾಡಿರಲಾರದು. ನಿಜವಾಗಿ ಇಂದು ಹಿರಿಯರು ಆತ್ತಂಕಕ್ಕೊಳಗಾಗಿದ್ದಾರೆ. ವಿನಯವಿಲ್ಲದ ವಿದ್ಯೆ, ಆಳವಾಗಿ ಅಭ್ಯಸಿಸಿ ತಿಳಿಯಬೇಕಾದುದನ್ನು ತಿಳಿಯದೆ, ದೊಂಬಿ, ಹರಟೆ, ಅವಿನಯಗಳಲ್ಲಿ ಪವಿತ್ರ ವಿದ್ಯಾಭ್ಯಾಸ ಜೀವನವನ್ನು ಬರಡುಗೊಳಿಸಿಕೊಂಡು ಪರೀಕ್ಷೆಯ ಕಣಕ್ಕಿಳಿದು ತೋಚಿದ್ದನ್ನು ಗೀಚಿ, ತೋಚದೆ ಇದ್ದುದನ್ನು ಕಾಪಿ ಮಾಡಿ ಸಿಬ್ಬಂದಿವರ್ಗವನ್ನು ಹೆದರಿಸಿಕೊಂಡು ಪುಂಡಾಟಕ್ಕಿಳಿದಿರುವ ಇಂದಿನ ಮಕ್ಕಳ ಭವಿಷ್ಯದ ಬಗೆಗೆ ಹಿರಿಯರೆಲ್ಲ ತಲೆಯಮೇಲೆ ಕೈಹೊತ್ತು ಕುಳಿತುಕೊಳ್ಳುವ ಪರಿಸ್ಥಿತಿಯೊದಗಿರುವುದು ನಿಜಕ್ಕೂ ದುರದೃಷ್ಟಕರ. ಅಸ್ಪಷ್ಟ ಬರವಣಿಗೆ, ಸೊಗಸುಗೆಟ್ಟ ವಾಕ್ಯ ಸಂಯೋಜನೆ, ಅಸಂಬದ್ಧ ಉತ್ತರ, ಹೊಣೆಗೆಟ್ಟ ರೀತಿನೀತಿ ಇವು ಇಂದಿನ ಬಹುಪಾಲು ವಿದ್ಯಾರ್ಥಿಗಳ ಉತ್ತರ ಪತ್ರಿಕೆಗಳನ್ನು ಬೆಲೆ ಕಟ್ಟುವವರ ದೂರು. ಇಂಥ ಮಕ್ಕಳ ಜೀವನಕ್ಕೆ ಮೌಲ್ಯ ಸಿಕ್ಕೀತೇ? ಮುಂದಿನ ಜಗತ್ತಿನಲ್ಲಿ ಬಾಳಲು ಇವರು ಅರ್ಹರಾಗುವರೇ? ಇಂಥವರೂ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಇದೇ ಶಿಕ್ಷಣ ಕ್ಷೇತ್ರಕ್ಕಿಳಿದು ತಮ್ಮ ವೃತ್ತಿಯನ್ನು ಎಷ್ಟರಮಟ್ಟಿಗೆ ನಿರ್ವಹಿಸಿಯಾರು? ಇವು ವಿಚಾರವಂತರ ತಲೆಯನ್ನು ತಿನ್ನುತ್ತಿರುವ ಪ್ರಶ್ನೆಗಳು. ಬಿಡಿಸಲಾರದ ಅನೇಕ ತೊಡಕುಗಳನ್ನು ಇಂದಿನ ಶಿಕ್ಷಣ ಕ್ಷೇತ್ರ ಹೊಂದಿದೆ. ಅಪಾರ ಧನ, ಶ್ರಮ, ಕಾಲ ವ್ಯರ್ಥವಾಗಿ ಬಹು ದೊಡ್ಡ ರಾಷ್ಟ್ರೀಯ ನಷ್ಟವನ್ನು ಅನುಭವಿಸಲಾಗುತ್ತಿದೆ. ಶಿಕ್ಷಣ ಕ್ಷೇತ್ರವೇ ಬಡವಾಗಿ ಹೋಗತೊಡಗಿದೆ, ಇದು ಕೇವಲ ಕರ್ನಾಟಕದ ಮಾತಲ್ಲ ಸಮಸ್ತ ಭಾರತದ ಮಾತು. ಕರ್ತವ್ಯಚ್ಯುತರೂ, ಸ್ವಾಭಿಮಾನ ಶೂನ್ಯರು, ವಿದ್ಯಾವಿನಯರಹಿತ ಶಾಸ್ತ್ರರೂ, ಗುರುಹಿರಿಯರಲ್ಲಿನ ಗೌರವದೂರರೂ ಆದ ಮಕ್ಕಳು ಮುಂದಿನ ರಾಷ್ಟ್ರದ ಸಂಪತ್ತಂತೂ ಆಗಲಾರರು; ನಿಜವಾಗಿ ಕಂಟಕರಾಗುವುದಂತೂ ಸತ್ಯ; ಇದೇ ದೊಡ್ಡ ವಿಪತ್ಕಾರಕ ಸಮಸ್ಯೆಯಾಗಿ ವಿಚಾರವಂತರ ತಲೆತಿನ್ನುವ ಸಮಸ್ಯೆಯಾಗಿ ಪರಿಣಮಿಸಿರುವ ಅಂಶ. ಕೆಲವು ಕಡೆ ಜಾತಿ ಮತ ದ್ವೇಷದ ಕಿಡಿ ಈಗಿನಿಂದಲೇ ವಿದ್ಯಾರ್ಥಿಗಳ ಕೋಮಲ ಮನೋಮಂದಿರಕ್ಕೆ ಬಿದ್ದಿದೆ. ವಿಷವೃಕ್ಷವಾಗಿ ಅವರ ಭಾವ ಭೂಮಿಯಿಂದ ಬೆಳೆಯತೊಡಗಿದ್ದೆ ವಿಷವೃಕ್ಷದ ಫಲ ವಿಷವೇ.

ಸ್ವಾತಂತ್ರ್ಯಾನಂತರ ಬಹು ಘಟಕಗಳುಳ್ಳ ಹಿಂದೂ ಸಮಾಜ ಮತ್ತು ಇನ್ನಿತರ

ಮತೀಯ ಸಮಾಜಗಳು ಪರಸ್ಪರ ಜಾತೀಯ ಸ್ಪರ್ಧೆಯಲ್ಲಿಯೇ ತನ್ನ ಸುಖವನ್ನು ಬಯಸತೊಡಗಿವೆ. ರಾಜಕೀಯ ಪಕ್ಷ ಪಂಗಡಗಳಿಗೂ ಕೊರತೆಯಿಲ್ಲ, ಅಲ್ಲಿಯೂ ಜಾತೀಯತೆಯ ಪಿಡುಗು. ೧೯೪೭ ರಿಂದ ರಾಜಕೀಯ ಪಕ್ಷಗಳು ವಿದ್ಯಾರ್ಥಿಗಳನ್ನು ತಮ್ಮ ಉದ್ದೇಶಸಾಧನೆಗೆ ಬಳಸಿಕೊಳ್ಳಲು ಪ್ರಾರಂಭಿಸಿದ ಮೇಲೆಯೇ ವಿದ್ಯಾರ್ಥಿಗಳಲ್ಲಿನ ಅಶಿಸ್ತಿನ ಅಧ್ಯಾಯ ಪ್ರಾರಂಭವಾಗಿದೆ. ಅದಕ್ಕೂ ಮೊದಲಿನ ಶಿಕ್ಷಣ ಕ್ಷೇತ್ರ ತನ್ನ ಪಾವಿತ್ರ್ಯವನ್ನು ಕಾಪಾಡಿಕೊಂಡು ಬರುತ್ತಿತ್ತು. ಅಂದಿನ ಸನ್ನಿವೇಶದಲ್ಲಿ ವಿದ್ಯಾರ್ಥಿಗಳನ್ನು ರಾಜಕೀಯಕ್ಕೆ ಬಳಸಿಕೊಂಡದ್ದು ಸರಿಯೋ ತಪ್ಪೋ. ಅದೊತ್ತಟ್ಟಿಗಿರಲಿ, ಸ್ವಾತಂತ್ರ್ಯಾನಂತರವೂ ಅವರಲ್ಲಿ ಶಿಸ್ತು, ಸಾಧ್ಯತೆ, ಕರ್ತವ್ಯ ಪ್ರಜ್ಞೆಯನ್ನುಂಟುಮಾಡುವಲ್ಲಿ ಸರಕಾರ, ಸಮಾಜ, ರಾಜಕೀಯ ಪಕ್ಷ ಪಂಗಡಗಳು ಸೋತುಹೋದವು. ದಿನೇದಿನೇ ವಿದ್ಯಾರ್ಥಿಗಳು ಶಾಲಾಕಾಲೇಜುಗಳ ಅರ್ಹತಾ ಪತ್ರಗಳನ್ನು ಮಾತ್ರ ಪಡೆಯುವ ಅಹಮಹಮಿಕೆಯಲ್ಲಿ ವಕ್ರಮಾರ್ಗ ತುಳಿಯತೊಡಗಿ ಅನೇಕ ವಿಧ್ವಂಸಕ ಕಾರ್ಯಗಳಲ್ಲಿ ತೊಡಗಿದ್ದಾರೆ. ಹೀಗಾಗಿ ಇಂದು ಅರ್ಹರಾದ ಅಭ್ಯರ್ಥಿಗಳನ್ನು ವಿವಿಧ ಸೇವಾ ಕ್ಷೇತ್ರಗಳಲ್ಲಿ ಪಡೆಯುವುದೇ ದುರ್ಲಭವಾಗುತ್ತಿದೆ. ಇದಿಷ್ಟರಿಂದಲೇ ಅರ್ಹತೆ ಪಡೆದವರಿಲ್ಲವೆಂದೇ ಅಲ್ಲ, ಅವರ ಸಂಖ್ಯೆ ತೀರಾ ಕಡಿಮೆಯಾಗಿದೆ. ಅರ್ಹತಾ ಪತ್ರ ಪಡೆದ ಅನರ್ಹರೇ ಹೆಚ್ಚಾಗುತ್ತಿದ್ದಾರೆ. ಇದು ರಾಷ್ಟ್ರದ ಮುನ್ನಡೆಗೆ ದೊಡ್ಡ ಕಂಟಕವೆಂಬುದನ್ನು ಭಾವೀ ರಾಷ್ಟ್ರ ಪ್ರಜೆಗಳಾದ ವಿದ್ಯಾರ್ಥಿಗಳೂ, ರಾಷ್ಟ್ರೀಯ ಮುಖಂಡರೂ ಎಷ್ಟು ಬೇಗ ತಿಳಿದಷ್ಟೂ ಕ್ಷೇಮ. ಅಪ್ರತಿಭರು, ಅವಿವೇಕಿಗಳು, ಪ್ರತ್ಯುತ್ಪನ್ನಮತಿಗಳಿಲ್ಲದ ಜನತೆಯಿಂದ ಸಮೃದ್ಧ ರಾಷ್ಟ್ರದ ಕನಸು ಕೇವಲ ಹಗಲುಗನಸು. ಆದ್ದರಿಂದ ಶಿಕ್ಷಣ ಕ್ಷೇತ್ರದಲ್ಲಿ ಈಗ ಉಂಟಾಗಿರುವ ಈ ಅನಿಷ್ಟವನ್ನು ಹೋಗಲಾಡಿಸಿ, ಅವನ್ನು ಯಥಾರ್ಥ ಸರಸ್ವತೀ ಮಂದಿರಗಳನ್ನಾಗಿ ಮಾಡುವತ್ತ ಜನತೆ ಮನಸ್ಸು ಮಾಡದಿದ್ದರೆ ಪ್ರಬಲ ರಾಷ್ಟ್ರಗಳ ಪದಾಘಾತಕ್ಕೆ ಸಿಕ್ಕಿ ತತ್ತರಿಸುವ ಕಾಲವೇನೂ ದೂರವಿದೆಯೆನ್ನಲಾಗದು. ಇದುವರೆಗೆ ರಾಷ್ಟ್ರೀಯ ಈ ಸಮಸ್ಯೆಯತ್ತ ಉದಾಸೀನ ತೋರಿದ್ದುದ್ದೇ ಅಕ್ಷಮ್ಯ ಅಪರಾಧ. ರಾಷ್ಟ್ರದಲ್ಲಿ ಸರಿಯಾದ ಮುಖಂಡರ ಅಭಾವದಿಂದಲೇ ಇಂಥ ಸಮಸ್ಯೆಗಳು ಭೂತಾಕಾರವಾಗಿ ಬೆಳೆಯುತ್ತವೆಯೋ ಏನೋ ಎನ್ನುವ ಭಾವನೆ ಜನತೆಯಲ್ಲಿ ಬೆಳೆಯತೊಡಗಿದೆ.

ಇಂದಿನ ವಿದ್ಯಾರ್ಥಿಗಳು ಸೂಕ್ಷ್ಮವಾಗಿ ಈ ಸಮಸ್ಯೆಯನ್ನು ವಿಚಾರಿಸಬೇಕು. ನಾವು ಗುಂಪುಗೂಡಿ ಚೀರಾಡಿ ಹಾರಾಡಿ ಕಂಡಕಂಡವರಿಗೆಲ್ಲ ಹಲ್ಲುಗಿರಿದು ಏನನ್ನಾದರೂ ಸಾಧಿಸೆವು ಹುಚ್ಚು ಹಟದಿಂದ ಮುಂದೆ ತಾವೇ ಬಾಳಬೇಕಾದ ಈ ರಾಷ್ಟ್ರದಲ್ಲಿ ಭ್ರಮೆಗೊಳಗಾಗಬೇಕಾದ ಕಾಲ ಬರಬಹುದು. ಓದದೆ ಪರೀಕ್ಷೆ ಪಾಸಾಗಬೇಕು, ದುಡಿಯದೆ ಫಲ ಪಡೆಯಬೇಕು. ಮಾತೆತ್ತಿದರೆ ಮುಷ್ಕರ, ಗಲಾಟೆ, ಅಬ್ಬರ, ಸಾರ್ವ

45 ನೇ ಪುಟ ನೋಡಿ



# ಚಿಂತನ

—ಡಾ|| ಸಿದ್ಧಯ್ಯ ಪುರಾಣಿಕ

## ನಮ್ಮ ಗುಣಗಳೇ ನಮ್ಮವಾಗಲಿ !

'ಶಿವನು ಪರಮ ಪ್ರೇಮರೂಪ, ಕರುಣಾಕರ, ದಯಾಮಯ, ಶಾಂತ ಸತ್ಯ ಶಿವ' ಇತ್ಯಾದಿಯಾಗಿ ಈಶ್ವರನ ಗುಣವರ್ಣನೆಯನ್ನು ಮಾಡುತ್ತೇವೆ. ಇವು ಈಶ್ವರನಿಗೆ ಮಾತ್ರ ಮೀಸಲಾದ ಗುಣಗಳೆ ಇಲ್ಲವೆ ಮಾನವರಿಗೂ ಮುಡಿಪಾದ ಗುಣಗಳೆ? ಇವು ದೇವಗುಣಗಳೆ ಜೀವ ಗುಣಗಳೆ? ಇವು ಮೊದಲು ದೇವಗುಣಗಳಾಗಿದ್ದು ಆಮೇಲೆ ಜೀವಗುಣಗಳಾದುವೆ ಇಲ್ಲವೆ ಮೊದಲು ಜೀವಗುಣಗಳಾಗಿ ಆಮೇಲೆ ದೇವ ಗುಣಗಳಾದುವೆ?

ಮಾನವನು ಕಾಲಕ್ರಮದಲ್ಲಿ ತನ್ನಲ್ಲಿಯೇ ಕಂಡುಕೊಂಡ ಶಾಂತಿ, ಪ್ರೇಮ, ಕರುಣೆ, ಸತ್ಯ ಮೊದಲಾದ ಶ್ರೇಷ್ಠಗುಣಗಳನ್ನು—ಅವುಗಳ ಆದರ್ಶ ರೂಪವನ್ನು, ಆತ್ಯಂತಿಕ ಸ್ವರೂಪವನ್ನು ಪರಮಾತ್ಮನಿಗೆ ಆರೋಪಿಸಿದನೆಂದು ವಿಚಾರವಾದಿಗೆ ತೋರಬಹುದು; ದೇವನೇ ತನ್ನ ಈ ಗುಣಗಳನ್ನು ಜೀವಿಗೆ ಇತ್ತು 'ಇವುಗಳನ್ನು ಉಳಿಸಿ, ಬೆಳೆಸಿ, ಬಾಳಿ ಬೆಳಗು' ಎಂದು ಆಶೀರ್ವದಿಸಿದನೆಂದು ಸಂಪ್ರದಾಯಮತಿಗೆ ಹೊಳೆಯಬಹುದು.

ಕುರಾನಿನಲ್ಲಿ ಹೀಗೆ ಹೇಳಿದೆ: "ಅಲ್ಪ ಪ್ರಮಾಣದಲ್ಲಾದರೂ ಸರಿಯೆ, ಸಂಕಲ್ಪ ಶಕ್ತಿ, ಶಾಂತ ಚಿತ್ತ, ಪ್ರೇಮ, ಕರುಣೆ ಮುಂತಾದ ದೈವೀ ಗುಣಗಳ ಧರ್ಮದರ್ಶಿತ್ವವನ್ನು ವಿಶ್ವಸ್ತಿಕೆಯನ್ನು ಮೊದಲು ನಾವು ಭೂಮಿ, ವ್ಯೋಮ, ಪರ್ವತಾದಿಗಳಿಗೆ ಕೊಡಲು ಮುಂದಾದೆವು. ಇವಾವೂ ಇದನ್ನು ಸ್ವೀಕರಿಸಲು ಸಿದ್ಧವಾಗಿ ಮುಂದೆ ಬರದಿರಲು ಮಾನವನು ಮುಂದೆ ಬಂದು ಹೇಳಿದ—ನಾನು ಈ ವಿಶ್ವಸ್ತಿಕೆಯನ್ನು ವಹಿಸಿಕೊಳ್ಳುತ್ತೇನೆ."

ಸಚರಾಚರ ಸೃಷ್ಟಿಯಿಂದ ಮಾನವನು ಮಾತ್ರ ಈ ದೈವೀಗುಣಗಳ ಧರ್ಮದರ್ಶಿತ್ವವನ್ನು ವಹಿಸಿಕೊಂಡ ಭಾಗ್ಯಶಾಲಿಯೆಂದಂತಾಯಿತು. ದೈವೀ ಗುಣಗಳೇ ಅವನ ದೈವೀ ಸಂಪತ್ತು. ಈ ಸಂಪತ್ತಿ ವಿವರ ಬೇಕೆನ್ನುವವರು ಭಗವದ್ಗೀತೆಯ ಹದಿನಾರನೆಯ ಅಧ್ಯಾಯವನ್ನು ನೋಡಲಿ.

(48 ನೇ ಪುಟ ನೋಡಿ)

# ನವನೀತ

(ಸಂಸ್ಕೃತ ಶ್ಲೋಕಗಳ ಕನ್ನಡ ಭಾವಾನುವಾದ)

**ಯತ್ರ ವಿದ್ವಜ್ಜನೋ ನಾಸ್ತಿ ಶ್ಲಾಘ್ಯಸ್ತತ್ರಾಲ್ಪ ಧೀರಪಿ ।**
**ನಿರಸ್ತ ಪಾದಪೇ ದೇಶೇ ಏರಂಡೋಽಪಿ ದ್ರುಮಾಯತೇ ॥**

ಪಂಡಿತರಿ ಇಲ್ಲದೆಡೆ ಶುದ್ಧ ಶುಂಠಿ
ಮಾನ್ಯತೆಯ ಹೊಂದುವನು ಜ್ಞಾನಿಯಂತೆ
ಮರದ ಗ್ರುಂಪಿರದ ಕಡೆ ಹರಳು ಗಿಡವೆ
ಮೆರೆಯುವುದು ತಂಪೀವ ತರುವಿನಂತೆ.

★ ★ ★

**ಸಾ ವಿದ್ಯಾ ಯಾ ವಿಮುಕ್ತಯೇ ತದ್ಧನಂ ಯದ್ದಾನಾಧಿಷ್ಠಿತಮ್ ।**
**ಸ ನರೋ ಯಃ ಪರೋಪಕಾರರತಃ ಸಾ ಸ್ತ್ರೀ ಯಾ ಚ ಪತಿವ್ರತಾ ॥**

ಮುಕ್ತಿಯನು ಕೊಡಬಲ್ಲುದದೆ ವಿದ್ಯೆ ತಾನು
ದಾನಕ್ಕೆ ವಿನಿಯೋಗವಾದದ್ದೆ ಧನವು
ಪರ ಹಿತದಿ ನಿರತನಾದವನವನೆ ನರನು
ಹದಿಬದೆಯೆ ಕುಲನಾರಿ ಇದುವೆ ದಿಟವು.

★ ★ ★

**ದುಷ್ಟಾ ಭಾರ್ಯಾ ಶಠಂ ಮಿತ್ರಂ ಭೃತ್ಯಶ್ಚೋತ್ತರದಾಯಕಃ ।**
**ಸಸರ್ಪೇ ಚ ಗೃಹೇ ವಾಸೋ ಮೃತ್ಯುರೇವ ನ ಸಂಶಯಃ ॥**

ಕೆಡುಕೆಣಿಪ ಮಡದಿಯಿರೆ, ಕೃತ್ರಿಮದ ಮಿತ್ರನಿರೆ
ಹಾವಿರುವ ಮನೆಯೊಳಿರೆ, ಎದುರಾಡಿ ಗದರಿಸುವ
ಸೇವಕನು ನಿನಗಿರಲು, ಸಂದೇಹಕೆಡೆಯಿರದು
ಸಾವು ಬಂದೊದಗುವುದು. ಇದು ಸತ್ಯವು.

'ಕಾವ್ಯಸುಧಾಪ್ರಿಯ'
—ಕೆ. ಜಿ. ರಂಗಯ್ಯ,



# ಜಗದ್ದರ್ಶನ ಮಾಲೆ—೧

ಸಿದ್ಧಗಂಗಾಶ್ರೀ

## ಭಾರತೀಯ ಸಂಸ್ಕೃತಿಯಲ್ಲಿ ಧರ್ಮದ ಸಮನ್ವಯ ಸ್ವರೂಪ

—ಪ್ರೊ. ಎಸ್. ಎಸ್. ರಾಘವಾಚಾರ್

### ೧. ನಾಗರಿಕತೆ ಮತ್ತು ಸಂಸ್ಕೃತಿ

ಇತಿಹಾಸದ ಶೋಧನೆಯಲ್ಲಿ ಸಾಮಾನ್ಯವಾಗಿ ನಾಗರಿಕತೆ ಮತ್ತು ಸಂಸ್ಕೃತಿಗೆ ಬೇರೆ ಬೇರೆ ಲಕ್ಷಣಗಳನ್ನು ಹೇಳುವುದುಂಟು. ನಾಗರಿಕತೆ ಎಂದರೆ ಮಾನವನು ತನ್ನ ದೈಹಿಕ ಮತ್ತು ಬಾಹ್ಯಜೀವನಕ್ಕೆ ಬೇಕಾದ ಸೌಕರ್ಯಗಳನ್ನು ತನ್ನ ಪ್ರಜ್ಞಾಬಲದಿಂದ ವ್ಯವಸ್ಥಿತ ರೀತಿಯಲ್ಲಿ ಒದಗಿಸಿಕೊಳ್ಳುವುದು. ಈ ವಲಯಕ್ಕೆ ಸೇರಿದ್ದು ವ್ಯವಸಾಯ, ಕೈಗಾರಿಕೆಗಳು, ಮನೆಮಟ ಕಟ್ಟಿಕೊಳ್ಳುವುದು, ಸ್ವರಕ್ಷಣೆಗೆ ಬೇಕಾದ ಸಾಧನಗಳನ್ನು ಒದಗಿಸಿಕೊಳ್ಳುವುದು ಮುಂತಾದುವು, ಬೇರೆ ಪ್ರಾಣಿಗಳು ತೋರಿಸದ ಈ ಕೌಶಲ ಸಮುದಾಯಕ್ಕೆ ನಾಗರಿಕತೆ ಎನ್ನುವುದು ವಾಡಿಕೆ. ಇವುಗಳಿಗೆ ಸೇರಿದ ಸಮಸ್ತ ಸಾಮಾಜಿಕ ಶಿಸ್ತುಗಳೂ ಇದರಲ್ಲಿ ಅಂತರ್ಗತವಾಗಿವೆ. ಹೀಗೆಯೇ ಮನುಷ್ಯನ ಬುದ್ಧಿ ಅಥವಾ ಆತ್ಮಕ್ಕೆ ಸಂಬಂಧಪಟ್ಟ ಅಂದರೆ ಆಂತರಿಕ ಆಕಾಂಕ್ಷೆಗಳಿಗೆ ಉತ್ತರವಾಗಿ ಕಲ್ಪಿಸಿಕೊಳ್ಳುವ ವ್ಯವಸ್ಥೆಗಳಿಗೆ ಸಂಸ್ಕೃತಿ ಎನ್ನಲಾಗಿದೆ. ಇವು ಬಾಹ್ಯಜೀವನದ ಸಾಧನವಾಗಿರದೆ, ಆತ್ಮತೃಪ್ತಿಗೋಸ್ಕರ ಎಸಗುವ ಕಾರ್ಯಕಲಾಪಗಳು. ಇಲ್ಲಿ ಸೌಂದರ್ಯೋಪಾಸನೆ, ಕಲೆಗಳು, ಕಾವ್ಯಾನಂದ, ಸ್ವಾರ್ಥವಿಲ್ಲದೆ ಪರಕಲ್ಯಾಣಕ್ಕಾಗಿಯೇ ದುಡಿಯುವ ನೈತಿಕಶೀಲ, ವಿಜ್ಞಾನ ಮತ್ತು ಜಿಜ್ಞಾಸೆಯ ರೂಪದಲ್ಲಿ ನಡೆಸಬಹುದಾದ ಸತ್ಯಾನ್ವೇಷಣೆ ಇವು ಮುಖ್ಯಾಂಶಗಳು. ನಾಗರಿಕತೆ ದೇಹ ಪೋಷಣೆಗಾದರೆ, ಸಂಸ್ಕೃತಿಯು ಆತ್ಮವಿಕಾಸವಾಗಿದೆ.

### ೨. ಸಂಸ್ಕೃತಿ ಮತ್ತು ಧರ್ಮ

ಸಂಸ್ಕೃತಿಯಲ್ಲಿ ಸ್ಥಾನಹೊಂದಿರುವ ಮತ್ತೊಂದು ಅಂಶವೆಂದರೆ ಧರ್ಮ. ಧರ್ಮ ಶಬ್ದಕ್ಕೆ ನೀತಿನಿಯಮಗಳೆಂದು ಅರ್ಥವಿದ್ದರೂ, ಅದರ ಮುಖ್ಯವಾದ ಅರ್ಥ ಆಧ್ಯಾತ್ಮಿಕತೆ. ಆಧ್ಯಾತ್ಮಿಕ ದೃಷ್ಟಿಯಿಂದ ಜೀವನವನ್ನು ರೂಪಿಸಿಕೊಳ್ಳುವುದಕ್ಕೆ ಧರ್ಮವೆಂದು ಪರಿಭಾಷೆ. ಇದು ಇಂಗ್ಲಿಷಿನ 'Religion' ಎಂಬ ಶಬ್ದದ ಪ್ರತಿನಿಧಿ. ಎಲ್ಲಾ ಪ್ರಬುದ್ಧವಾದ ಸಂಸ್ಕೃತಿಯಲ್ಲೂ ಈ ಅರ್ಥದ ಧರ್ಮಕ್ಕೆ ಸ್ಥಾನವಿದೆ. ಇತ್ತೀಚಿನ ಕೆಲವು ಸಂಸ್ಕೃತಿಗಳಲ್ಲಿ ಇದನ್ನು ತೆಗೆದುಹಾಕಲು ಸಾಕಷ್ಟು ಪ್ರಯತ್ನವಾಗಿದ್ದರೂ, ಆ ಪ್ರಯತ್ನ ಪೂರ್ಣವಾಗಿ ಸಫಲವಾಗಿದೆ ಎಂದು ಹೇಳುವಂತಿಲ್ಲ.

### ೩. ಭಾರತ ಸಂಸ್ಕೃತಿ ಮತ್ತು ಧರ್ಮ

ಮೇಲೆ ಸೂಚಿಸಿದಂತೆ ಸಾಮಾನ್ಯವಾಗಿ ಎಲ್ಲಾ ಸಂಸ್ಕೃತಿಯಲ್ಲೂ ಧರ್ಮವಿದ್ದರೂ, ಭಾರತ ಸಂಸ್ಕೃತಿಯ ವೈಶಿಷ್ಟ್ಯವೇನೆಂದರೆ, ಧರ್ಮಕ್ಕೆ ಅಂಶಸ್ಥಾನವನ್ನು ಕೊಡದೆ ಅದಕ್ಕೆ 'ಅಂಶಿ'ಯ ಸ್ಥಾನವನ್ನು ಕೊಟ್ಟಿದೆ. ಅಂದರೆ ಸೌಂದರ್ಯ ಸೇವೆ, ನೈತಿಕ ನಿಯಮಗಳು, ತತ್ತ್ವಾನ್ವೇಷಣೆ ಇವೇ ಮೊದಲಾದ ಸಂಸ್ಕೃತಿಯ ಇತರ ಅಂಗಗಳೆಲ್ಲಾ ಧರ್ಮದಿಂದ ವ್ಯಾಪ್ತವಾಗಿ, ಧರ್ಮವೇ ಸಂಸ್ಕೃತಿಯ ಆತ್ಮಸ್ವರೂಪವಾಗಿದೆ. ಜೀವನದ ಎಲ್ಲ ಧ್ಯೇಯಸಾಧನೆ ಧರ್ಮದ ಸ್ಫೂರ್ತಿಯಿಂದ ನಡೆಯಬೇಕೆನ್ನುವುದು ಈ ಸಂಸ್ಕೃತಿಯ ಮೂಲತತ್ತ್ವ. ಭಾರತದಲ್ಲಿ ಮೂರು ಪ್ರಧಾನವಾದ ಧರ್ಮಪರಂಪರೆಗಳು ಹುಟ್ಟಿ ಬೆಳೆದವು. ಇವು ವೈದಿಕ ಧರ್ಮ–ಇದರಲ್ಲೇ ಅನೇಕ ಶಾಖೆಗಳುಂಟು-ಜೈನಧರ್ಮ, ಹಾಗೆಯೇ ಬೌದ್ಧಧರ್ಮ; ಈ ಧರ್ಮಗಳ ಸ್ಥೂಲಪರಿಚಯ ಮಾಡಿಕೊಂಡರೂ, ಪ್ರಪಂಚದ ಇತರ ಧರ್ಮಗಳ, ಅಂದರೆ ಯಹೂದ್ಯಧರ್ಮ, ಕ್ರೈಸ್ತಧರ್ಮ, ಇಸ್ಲಾಂಧರ್ಮ, ಹಾಗೆಯೇ ಜರಥುಷ್ಟ್ರಧರ್ಮ, ಚೈನಾದೇಶದ ಎರಡು ಧರ್ಮಪಂಥಗಳು, ಇವುಗಳೆಲ್ಲದರ ಮುಖ್ಯತತ್ತ್ವಗಳ ಸಂವಾದವನ್ನು ಸ್ಪಷ್ಟವಾಗಿ ಇವುಗಳಲ್ಲಿ ಕಾಣಬಹುದು. ಹೀಗೆ ವಿಶ್ವಧರ್ಮಗಳ ಪ್ರತಿನಿಧಿಯಂತಿರುವ ಭಾರತಧರ್ಮ ಭಾರತ ಸಂಸ್ಕೃತಿಯ ಉಗಮ ಸ್ಥಾನವಾಗಿದೆ.

### ೪. ಭಾರತಧರ್ಮದ ವ್ಯಾಪಕ ಸಂದೇಶ

ವಿಶಾಲವಾದ ಭಾರತಧರ್ಮದ ಮುಖ್ಯ ಬೋಧನೆಗಳನ್ನು ವಿಶ್ಲೇಷಣೆ ಮಾಡಿದರೆ, ಆ ಮೂಲಕ ಸರ್ವಧರ್ಮಗಳ ಸಮನ್ವಯದ ಸಾಧ್ಯತೆ ಅರಿವಾಗುವುದಲ್ಲದೆ, ಧರ್ಮದ ನಿಮಿತ್ತದಿಂದ ಜನಾಂಗಗಳ ದ್ವೇಷ ಮತ್ತು ಅಸಹನೆ ತೀವ್ರ ಅಯುಕ್ತವೆಂದೂ ಸ್ಪಷ್ಟಪಡುವುದು. ಈ ಮೂಲ ತತ್ತ್ವಗಳನ್ನು ಸ್ಥೂಲವಾಗಿಯಾದರೂ ನಿರೂಪಿಸುವುದು ಈ ಕಾರಣದಿಂದ ಅಗತ್ಯವಾಗಿದೆ.

ಅ) **ಜ್ಞಾನ**:–ಧರ್ಮದಲ್ಲಿ ಮನುಷ್ಯನ ಜ್ಞಾನಕ್ಕೆ ಸಂಬಂಧಪಟ್ಟ ಮೀಮಾಂಸೆ ನಡೆದಿದೆ. ಸಾಮಾನ್ಯವಾಗಿ ಲೌಕಿಕ ದೃಷ್ಟಿಯಲ್ಲಿ ಜ್ಞಾನವೆಂದರೆ ನಮ್ಮ ಪ್ರತ್ಯಕ್ಷ ಅನುಭವ ಹಾಗೂ ಅದರ ಮೇಲೆ ನಾವು ಮಾಡಬಹುದಾದ ತರ್ಕಬದ್ಧವಾದ ಊಹೆ ಅಥವಾ ಅನುಮಾನ, ಧರ್ಮಕ್ಕೆ ಇಷ್ಟೇ ಸಾಲದು. ಪಕ್ವವಾದ ಪ್ರಜ್ಞೆಗೆ ಇವುಗಳನ್ನೂ ಮೀರಿದ ಲೋಕಾತೀತ ಪರತತ್ತ್ವ ವಿಷಯಕಜ್ಞಾನ ಅಥವಾ ದರ್ಶನ ಬರುತ್ತದೆಂದು ಧರ್ಮಸಿದ್ಧಾಂತ ಮಾಡುತ್ತದೆ. ಇದಕ್ಕೆ ಸಾಕ್ಷಾತ್ಕಾರ, ಕೇವಲ ಜ್ಞಾನ, ಮಹಾಬೋಧೆ ಎಂದು ಬೇರೆ ಬೇರೆ ಹೆಸರುಗಳನ್ನು ಕೊಡಲಾಗಿದೆ. ಬುದ್ಧನಿಗೆ ಇದು ಮಹಾಬೋಧಿ ವೃಕ್ಷದ ಕೆಳಗೆ ಲಭಿಸಿತು. ಜೈನ ತೀರ್ಥಂಕರರೆಲ್ಲಾ ಇದನ್ನು ತಮ್ಮ ಸಾಧನೆಯ ಕೊನೆಯ ಸೋಪಾನದಲ್ಲಿ ಹೊಂದಿದರು. ಉಪನಿಷತ್ಕಾರರು ಇದನ್ನು ದರ್ಶನ





ಎಂದು ವ್ಯವಹರಿಸುತ್ತಾರೆ. ಮೋಸಸ್, ಯೇಸು, ಮಹಮ್ಮದ್ ಪೈಗಂಬರರು ಎಲ್ಲರೂ ಈ ಜ್ಞಾನಲಾಭದಿಂದ ಪೂರ್ಣತೆ ಹೊಂದಿದ ಪ್ರವಾದಿಗಳಾದರೆಂದು ನಂಬಲಾಗಿದೆ. ಅವರ ಉಪದೇಶಕ್ಕೆ ಶಾಸ್ತ್ರವೆಂದು ಹೆಸರು. ಆ ಶಾಸ್ತ್ರದ ಪ್ರಾಮಾಣ್ಯಕ್ಕೆ ಮೂಲ ಈ ಪರಮಾರ್ಥಾನುಭವ. ಈ ರೀತಿಯ ಲೋಕೋತ್ತರ ತತ್ತ್ವಸಾಕ್ಷಾತ್ಕಾರವನ್ನು ಒಪ್ಪದಿರುವ ಯಾವ ಧರ್ಮವೂ ಪ್ರಪಂಚದಲ್ಲಿ ಪ್ರಚಲಿತವಾಗಿಲ್ಲ. ಈ ಸಾಕ್ಷಾತ್ಕಾರವನ್ನು ಪ್ರತಿ ಸಾಧಕನೂ ತನ್ನ ಸಾಧನದ ಚರಮಸಿದ್ಧಿಯಲ್ಲಿ ಪಡೆಯಬಹುದು, ಪಡೆಯಬೇಕೆಂದು ಧರ್ಮಗಳೆಲ್ಲಾ ಸಾರುತ್ತವೆ.

ಆ) **ತತ್ತ್ವ**:—ತತ್ತ್ವವೆಂದರೆ ವಸ್ತುಗಳ ನೈಜಸ್ವರೂಪ. ಸಾಮಾನ್ಯ ದೃಷ್ಟಿಗೆ ಪ್ರಕೃತಿ 'ತತ್ತ್ವ'ವೆಂದು ಭಾಸವಾಗುತ್ತದೆ. ಸ್ವಲ್ಪ ಮುಂದೆ ವಿಚಾರಿಸಿದರೆ, ಜೀವಂತ ಪ್ರಾಣಿಗಳ ಸಾರಭೂತವಾದ ಚೇತನವು 'ತತ್ತ್ವ'ವೆಂದು ಅರಿವಾಗುತ್ತದೆ. ಇನ್ನೂ ಮುಂದೆ ಸಾಗಿದರೆ, ಈ ಅಚೇತನ ಪ್ರಕೃತಿ ಮತ್ತು ಸಾಮಾನ್ಯ ಜೀವಗಳನ್ನು ಮೀರಿದ, ಅತ್ಯಂತ ಉತ್ಕೃಷ್ಟ ಮತ್ತು ಅನಂತವಾದ ಪರಮಾತ್ಮ, ಈಶ್ವರ ಅಥವಾ ಉಪನಿಷತ್ತುಗಳು ಸಾರುವ ಬ್ರಹ್ಮವೆಂಬ ತತ್ತ್ವ ಪ್ರಾಮಾಣಿಕವಾಗಿ ತತ್ತ್ವವೆಂದು ಕಂಡುಬರುತ್ತದೆ. ನಿರೀಶ್ವರವಾದದಂತೆ ತೋರುವ ಜೈನ ಮತ್ತು ಬೌದ್ಧಧರ್ಮಗಳಲ್ಲೂ, ಕೊನೆಯಲ್ಲಿ ಧರ್ಮವನ್ನೊ ಅಥವಾ ಬುದ್ಧನನ್ನೊ ಈ ಅನಂತ ವಸ್ತುವೆಂದು ಪರಿಗಣಿಸಲಾಗಿದೆ. ಲೋಕಾತೀತ ಅನುಭವ ಮತ್ತು ಈ ಲೋಕಾತೀತವಾದ ಅನಂತ, ಅದ್ವಯ ತತ್ತ್ವವನ್ನು ಎಲ್ಲ ಭಾರತೀಯ ಧರ್ಮಗಳೂ ಅಪ್ಪೇಕೆ, ಎಲ್ಲ ವಿಶ್ವಧರ್ಮಗಳೂ ಸಾರುತ್ತವೆ.

ಇ) **ಪುರುಷಾರ್ಥ**:—ಮಾನವ ಜೀವನದ ಗುರಿ ಏನೆಂಬುವುದು ಎಲ್ಲ ಧರ್ಮಗಳಲ್ಲೂ ಎತ್ತಿರುವ ಒಂದು ಮೂಲ ಪ್ರಶ್ನೆ. ಇದು ಕೇವಲ ಇಂದ್ರಿಯ ಸುಖವಾಗಲಿ, ಆರ್ಥಿಕ ಸಂಪತ್ತಾಗಲಿ, ಲೌಕಿಕ ಪ್ರತಿಷ್ಠೆ ಇಷ್ಟೇ ಆಗಲಾರದು. ಇವು ನಶ್ವರ ಮತ್ತು ಪರಿಮಿತವಾದುವು. ಅಪರಿಮಿತವಾದ ಸರ್ವೋತ್ಕೃಷ್ಟವಾದ ಪುರುಷಾರ್ಥ ಒಂದಿದೆ ಎಂದು ಎಲ್ಲ ಧರ್ಮಗಳೂ ವಾದಿಸುತ್ತವೆ. ಇದಕ್ಕೆ ಭಾರತೀಯ ಪರಿಭಾಷೆಯಲ್ಲಿ ಮೋಕ್ಷವೆಂದು ಹೆಸರು. ಹೆಸರೇ ಸೂಚಿಸುವಂತೆ ಇದು ಸಂಕೋಚ ತಂದೊಡ್ಡುವ ಪ್ರತಿಬಂಧಕಗಳೆಲ್ಲದರಿಂದಲೂ ಬಿಡುಗಡೆ ಹೊಂದಿ ಮನುಷ್ಯನ ಆತ್ಮ ತನ್ನ ಸ್ವಾಭಾವಿಕ ಪೂರ್ಣತೆಯನ್ನು ಹೊಂದುವುದು. ಇದನ್ನು ಹೊಂದಲು ಒಂದೇ ಒಂದು ಮಾರ್ಗ. ಮೂಲತತ್ತ್ವವಾದ ಈಶ್ವರ ಅಥವಾ ಬ್ರಹ್ಮನಿಂದ ವಿಮುಖವಾದದ್ದರಿಂದ ಜೀವ ಚೈತನ್ಯಕ್ಕೆ ಸಂಕೋಚ, ಅಪೂರ್ಣತೆ ಬಂದಿರುವುದು; ಆ ಕಾರಣದಿಂದ ಆ ಅಂತಿಮತತ್ತ್ವದಲ್ಲಿ ಸಮಾವೇಶಗೊಳ್ಳುವುದೇ ಪೂರ್ಣತೆಗೆ ದಾರಿ. ಬ್ರಹ್ಮಾನುಭವವನ್ನು ಸಿದ್ಧಿಸಿಕೊಳ್ಳುವುದೇ ಮೋಕ್ಷ. ಇದನ್ನೆ 'Kingdom of God'

ಎಂದು ಕ್ರೈಸ್ತಧರ್ಮದಲ್ಲಿ ನಿರ್ದೇಶಿಸುವುದು. ಇವಕ್ಕೆ ಭಾರತೀಯ ದರ್ಶನಗಳಲ್ಲಿ ಕೈವಲ್ಯ, ನಿರ್ವಾಣ, ಬ್ರಹ್ಮಭಾವ, ಅಪವರ್ಗ ಮೊದಲಾದ ಶಬ್ದಗಳನ್ನು ಬಳಸಲಾಗಿದೆ. ನದಿಯು ಸಮುದ್ರ ಸೇರುವುದರಿಂದ ಬರುವ ವೈಶಾಲ್ಯ ಮತ್ತು ಶಾಂತಿಗೆ ಇದನ್ನು ಉಪನಿಷತ್ತುಗಳು ಹೋಲಿಸುತ್ತವೆ. ಇದು ಉಪಮೆಗೆ ಮೀರಿದ ಆತ್ಮಕಲ್ಯಾಣದ ಆವಿರ್ಭಾವ.

ಈ) **ಸಾಧನಮಾರ್ಗಗಳು :**—ಭಗವದ್ ತತ್ತ್ವದಲ್ಲಿ ಜೀವತತ್ತ್ವವನ್ನು ಸಮರ್ಪಿಸುವುದು ಮೋಕ್ಷವಾದರೆ, ಇದರ ಸಾಧನೆಯ ಮಾರ್ಗಗಳನ್ನು ಚಿಂತಿಸಬೇಕಾಗುತ್ತದೆ. ಈ ಸಾಧನೆಗಳು ಜೀವನದಲ್ಲಿ ಸಿದ್ಧವಾಗಿರುವ ಶಕ್ತಿಗಳನ್ನು ಅವಲಂಬಿಸುತ್ತವೆ. ಆ ಶಕ್ತಿಗಳನ್ನು ಮೂರು ವಿಧವಾಗಿ ವಿಂಗಡಿಸಲಾಗಿದೆ. ಜ್ಞಾನಶಕ್ತಿ, ಕ್ರಿಯಾಶಕ್ತಿ ಹಾಗೆಯೇ ಭಾವಶಕ್ತಿಗಳು ಅವಾಗಿವೆ. ಜ್ಞಾನಶಕ್ತಿಯನ್ನು ಉಪಯೋಗಿಸಿಕೊಂಡು, ವಿಚಾರಮಾಡಿ ಪರತತ್ತ್ವವನ್ನು ಸೇರುವುದಕ್ಕೆ ಜ್ಞಾನಯೋಗವೆಂದು ಹೆಸರು. ಕ್ರಿಯಾಶಕ್ತಿಯನ್ನು ನಿಸ್ವಾರ್ಥತೆಯಿಂದ ಈಶ್ವರ ಪ್ರಾಪ್ತಿಗೋಸ್ಕರ ಲೋಕಕಲ್ಯಾಣಕ್ಕೆ ಉಪಯೋಗಿಸುವುದು ಕರ್ಮಯೋಗವೆಂದೆನಿಸಿಕೊಳ್ಳುತ್ತದೆ. ಭಾವಶಕ್ತಿಯನ್ನು ಪ್ರೇಮವಾಗಿ ಪರಿವರ್ತಿಸಿಕೊಂಡು, ಸರ್ವಪ್ರೇಮವನ್ನು ಆ ಮಹದ್ವಸ್ತುವಿಗೆ ಧಾರೆಯೆರೆಯುವುದು ಭಕ್ತಿಯೋಗವೆನಿಸುತ್ತದೆ. ಈ ಮೂರು ಪರಸ್ಪರ ವಿರುದ್ಧವಾದ ಅಥವಾ ಬೇರೆ ಬೇರೆಯಾದ ಪಂಥಗಳಲ್ಲಿ ಅನುಭವಿಸಿ ಸಮುಚ್ಚಯಗೊಳಿಸಿ ಸರ್ವತೋಮುಖವಾಗಿ ಪರತತ್ತ್ವವನ್ನು ಕುರಿತು ಭಾವಿಸುವುದೇ ಶ್ರೇಯೋಮಾರ್ಗ. ಎಲ್ಲ ಧರ್ಮಗಳಲ್ಲೂ ಇವು ಉಪದಿಷ್ಟವಾಗಿವೆ. ಭಾರತೀಯ ಧಾರ್ಮಿಕ ಸಾಹಿತ್ಯದಲ್ಲಿ ಇದನ್ನು ವಿಶೇಷ ರೀತಿಯಲ್ಲಿ ಉಪದೇಶಿಸಲು ಹುಟ್ಟಿರುವ ಶಾಸ್ತ್ರವೆ ಶ್ರೀಮದ್ಭಗವದ್ಗೀತಾ.

ಸಣ್ಣ ಸಣ್ಣ ವಿಷಯಗಳನ್ನು ಬಿಟ್ಟು ಮೂಲ ತತ್ತ್ವಗಳನ್ನು ವಿಮರ್ಶಿಸಿದರೆ ಭಾರತೀಯ ಧರ್ಮವು ಸರ್ವಧರ್ಮಗಳ ಸಮನ್ವಯವನ್ನು ಖಚಿತವಾಗಿ ನೀಡುತ್ತದೆ. ಇಂತಹ ಧರ್ಮವೇ ನಮ್ಮ ಸಂಸ್ಕೃತಿಯ ಕೇಂದ್ರ ಸ್ಫೂರ್ತಿ, ಎಲ್ಲ ಧರ್ಮಗಳೂ ಏಕಮಾತ್ರ ಧರ್ಮಗಂಗೆಯ ಬೇರೆ ಬೇರೆ ದಡಗಳು. ಈ ಗಂಗೆಯ ಜೀವದಾಯಕ ಜಲದಿಂದ ಪೋಷಿತವಾಗುವ ಬೆಳೆಯೇ ಸಂಸ್ಕೃತಿಯ ಇತರ ಅಂಗಗಳು, ಈ ಸಂಪತ್ತನ್ನು ನಾವು ರಕ್ಷಿಸಿದಷ್ಟೂ ಅದು ನಮ್ಮನ್ನು ರಕ್ಷಿಸಬಲ್ಲದು.

ಹಾವಿನ ಹೆಡೆಗಳ ಕೊಂಡು ಕನ್ನೆಯ ತುರಿಸಿಕೊಂಡಂತೆ
ಉರಿವ ಕೊಳ್ಳಿಯ ಕೊಂಡು ಮಂಡೆಯ ಸಿಕ್ಕಬಿಡುಸುವಂತೆ
ಹುಲಿಯ ಮೀಸೆಯ ಹಿಡಿದುಕೊಂಡು ಒಲೆದುಯ್ಯಲನಾಡುವಂತೆ
ಕೂಡಲಸಂಗನ ಶರಣರೊಡನೆ ಸರಸವಾಡಿದರೆ
ಸುಣ್ಣದ ಕಲ್ಲ ಮಡಿಲಲ್ಲಿ ಕಟ್ಟಿಕೊಂಡು ಮಡುವ ಬಿದ್ದಂತೆ.



# ಮಾತು ಮುತ್ತು

ಎಚ್. ಎಸ್. ಸಿದ್ಧಲಿಂಗಪ್ಪ, ಎಂ.ಎ.,
ಸಾಮಾಜಿಕ ಕಾರ್ಯಕರ್ತ, ಮೆಗ್ಗಾನ್ ಆಸ್ಪತ್ರೆ, ಶಿವಮೊಗ್ಗ 577-201.

"ಮಾತು ಆಡಿದರೆ ಹೋಯಿತು, ಮುತ್ತು ಒಡೆದರೆ ಹೋಯಿತು" "ಮಾತು ಬಲ್ಲವನಿಗೆ ಜಗಳವಿಲ್ಲ, ಊಟ ಬಲ್ಲವನಿಗೆ ರೋಗವಿಲ್ಲ" "ಮಾತೇ ಮಾಣಿಕ್ಯ, ಮಾತು ಮನೆ ಕೆಡಿಸಿತು" "ಜಾಣನಿಗೆ ಮಾತಿನ ಪೆಟ್ಟು, ದಡ್ಡನಿಗೆ ದೊಣ್ಣೆ ಪೆಟ್ಟು ಇತ್ಯಾದಿ ಜನಪ್ರಿಯ ಗಾದೆಗಳು ಮಾತಿನ ಮಹತ್ವವನ್ನು ಪರಿಚಯ ಮಾಡಿಕೊಡುತ್ತವೆ.

ದೈನಂದಿನ ವ್ಯವಹಾರಗಳಲ್ಲಿ ನಮ್ಮ ಭಾವನೆಗಳನ್ನು ಅಭಿವ್ಯಕ್ತಪಡಿಸಲು, ವಿಚಾರ ವಿನಿಮಯ ಮಾಡಿಕೊಳ್ಳಲು ಮಾತು ಒಂದು ಮಾಧ್ಯಮ. ಮಾತು ವ್ಯಕ್ತಿಯ ವಿಕಾಸಕ್ಕೆ, ಭವಿಷ್ಯಕ್ಕೆ ನಾಂದಿಯಾಗಬೇಕೇ ಹೊರತು, ವಿನಾಶಕ್ಕೆ ಬುನಾದಿಯಾಗಬಾರದು. ವ್ಯಕ್ತಿ ಸಮಯ, ಸಂದರ್ಭಗಳನ್ನು ಅರ್ಥಮಾಡಿಕೊಂಡು ಹದವರಿತು ಮಾತನಾಡಿದರೆ ಒದಗಬಹುದಾದ ಅನೇಕ ತೊಂದರೆಗಳನ್ನು ನಿವಾರಿಸಿಕೊಳ್ಳಬಹುದು. ಅದೇ ಮಾತು ಹದಗೆಟ್ಟರೆ, ಅವಮಾನಿತನಾಗುವುದರ ಜೊತೆಗೆ ಅನೇಕ ಸಮಸ್ಯೆಗಳ ವರ್ತುಲದಲ್ಲಿ ಸಿಕ್ಕಿಹಾಕಿಕೊಳ್ಳಬಹುದು.

ಪ್ರೀತಿ, ವಿಶ್ವಾಸ, ಆತ್ಮೀಯತೆಗೆ, ವ್ಯಕ್ತಿ-ವ್ಯಕ್ತಿಗಳ ನಡುವಿನ ಸ್ನೇಹ ಸೇತುವೆಗೆ ಮಾತೇ ಕಾರಣ. ಅಂತೆಯೆ ಅನೇಕ ಜಗಳಗಳಿಗೆ, ಮನಸ್ತಾಪಗಳಿಗೆ, ದ್ವೇಷಕ್ಕೆ ಮಾತೆ ಮೂಲ. ಹೊರನೋಟಕ್ಕೆ ಮಾತಿನ ಸ್ವರೂಪ ಒಂದೇ ಎಂದು ಕಂಡುಬಂದರೂ, ಅದರ ವಿಸ್ತಾರ, ವ್ಯಾಪ್ತಿ ಅನಂತ. ಪ್ರೀತಿಯ ಮಾತು, ವಾತ್ಸಲ್ಯದ ಮಾತು, ಅನುಕಂಪದ ಮಾತು, ಚಾಡಿ ಮಾತು, ವ್ಯಂಗ್ಯದ ಮಾತು ದ್ವೇಷದ ಮಾತು, ಹಾಸ್ಯದ ಮಾತು, ಹೀಗೆ ಪಟ್ಟಿ ಬೆಳೆಯುತ್ತಲೇ ಹೋಗುತ್ತದೆ.

ದಿನ ನಿತ್ಯದ ವ್ಯವಹಾರಗಳಲ್ಲಿ, ಎಷ್ಟೋ ವೇಳೆ ಕ್ಷುಲ್ಲಕ ಕಾರಣಗಳಿಗಾಗಿ ದೊಡ್ಡ ಜಗಳವೇ ನಡೆಯುತ್ತದೆ. ಉಗುರಿನಲ್ಲಿ ಹೋಗುವಂತದ್ದನ್ನು ಕೊಡಲಿಯಿಂದ ಹೊಡೆ- ಸಾಹಸಕ್ಕೆ ಮಾತು ಎಡೆಮಾಡಿಕೊಡುತ್ತದೆ. ಕೆಲವು ವೇಳೆ ಅನಾವಶ್ಯಕ ಮಾತುಗಳು ಬೆಳೆಯುತ್ತಾ ನಮ್ಮನ್ನೇ ಸುಡುವ ದಳ್ಳುರಿಯಾಗಿ ಪರಿಣಮಿಸುತ್ತದೆ.

ಭಾರತೀಯ ಸಂಸ್ಕೃತಿಯಲ್ಲಿ ಮಾತಿಗೆ ಕೊಟ್ಟ ಮಹತ್ವ, ಮನ್ನಣೆ ಅರ್ಥಪೂರ್ಣ. ಮಾತನ್ನು ವಚನ, ಭಾಷೆ, ಪ್ರಮಾಣಿಕ ಸಂಪಾದಿಯಾಗಿಯೂ ಬಳಸಿದ್ದಾರೆ. ಪಾಂಡವರು ಜೂಜಾಡುವಾಗ ಮಾತನ್ನು ಬಂಡವಾಳತನ್ನಾಗಿಟ್ಟುಕೊಂಡು

ಆಡಿದರು. ಹರಿಶ್ಚಂದ್ರ ವಿಶ್ವಾಮಿತ್ರನಿಗೆ ಕೊಟ್ಟ ಮಾತನ್ನು ಉಳಿಸಿಕೊಳ್ಳುವುದಕ್ಕಾಗಿ ರಾಜ್ಯ, ಹೆಂಡತಿ, ಮಕ್ಕಳು, ಸಮಸ್ತವನ್ನೂ ಕಳೆದುಕೊಂಡು ಚೆಂಡಾಲನಾದ ಗೋವಿನ ಕಥೆಯಲ್ಲಿ ಮಾತಿಗೆ ಕೊಟ್ಟ ಹಿರಿಮೆಯ ಪರಿಚಯವಾಗುತ್ತದೆ. ಈ ಕಥೆ ನಮ್ಮ ಸಂಸ್ಕೃತಿಯ ತಿರುಳೂ ಹೌದು.

ಮಾತು ತುಟಿಯ ಒಳಗೆ ಇರುವವರೆಗೂ ನಮ್ಮ ಅಧೀನ. ಆಗ ಅದು ನಾವು ಹೇಳಿದಂತೆ ಕೇಳುವ ನಮ್ರ ನಂಬಿಕಸ್ಥ ಸೇವಕನಂತೆ ವರ್ತಿಸುತ್ತದೆ. ಅದು ಒಮ್ಮೆ ತುಟಿಯಿಂದ ಹೊರಗೆ ಜಾರಿದರೆ ನಮ್ಮ ಹಿಡಿತಕ್ಕೆ ಸಿಕ್ಕುವುದಿಲ್ಲ. ಹಾಗೆ ಅದು ಜಾರುವ ಮುನ್ನ ಹತ್ತಾರು ಬಾರಿ ಯೋಚನೆ ಮಾಡಿ ತೂಕ ತಪ್ಪದಂತೆ ಮಾತನಾಡಿದರೆ ಆರೋಗ್ಯಕರವಾದ ಜೀವನ ನಡೆಸಬಹುದು. ಕೆಲವು ಸಂದರ್ಭಗಳಲ್ಲಿ ಮಾತನಾಡುವುದಕ್ಕಿಂತ ಸುಮ್ಮನಿರುವುದೇ ಲೇಸು. ಅದಕ್ಕೆ " ಮಾತು ಬೆಳ್ಳಿಯಾದರೆ ಮೌನ ಚಿನ್ನ " ಎಂದಿದ್ದಾರೆ ಅನುಭವಿಗಳು.

ಮಾತು ಬೇರೊಬ್ಬರ ಮನಸ್ಸನ್ನೆ ಅರಳಿಸಬೇಕೇ ಹೊರತು ಮುದುಡಿ ಹೋಗುವಂತೆ ಮಾಡಬಾರದು. ರಸಿಕತನದಿಂದ ಕೂಡಿದ ಮಾತು ಹುಣ್ಣಿಮೆಯ ರಾತ್ರಿಯಲ್ಲಿ ತಂಗಾಳಿ ಬೀಸಿದಷ್ಟೇ ಮನಸ್ಸಿಗೆ ಆಹ್ಲಾದವನ್ನುಂಟುಮಾಡುತ್ತದೆ. ಅದಕ್ಕೆ ಸರ್ವಜ್ಞ

ರಸಿಕನಾಡಿದ ಮಾತು ಶಶಿಯುದಿಸಿ ಬಂದಂತೆ
ರಸಿಕನಲ್ಲದವನ ಮಾತು—ಕಿವಿಗೆ
ಕೂರ್ದಸಿಯ ಬಡಿದಂತೆ ಸರ್ವಜ್ಞ

ಎಂದಿದ್ದಾನೆ.

ಬೇರೊಬ್ಬರ ಮನಸ್ಸನ್ನು ಅರ್ಥಮಾಡಿಕೊಂಡು ಮಾತನಾಡುವುದು ಸುಸಂಸ್ಕೃತ ವ್ಯಕ್ತಿಯ ಲಕ್ಷಣ. ಉತ್ತಮ ಬಾಂಧವ್ಯ, ಸೌಹಾರ್ದತೆ ಇವುಗಳಿಗೆ ಮಾತೇ ಕಾರಣ ದುಡುಕಿನಿಂದ, ಸಿಡುಕಿನಿಂದ ಆಡುವ ಮಾತು ಬೇರೊಬ್ಬರಿಗೆ ಕೋಪ, ತಾಪ, ದ್ವೇಷ ರೋಷ ಉಂಟುಮಾಡಿ ಕೊನೆಗೆ ತಮಗೇ ಮಾರಕಾಸ್ತ್ರವಾಗುತ್ತದೆ, ಮಾತಿನ ಮಹತ್ವವನ್ನು ಕುರಿತು ಬಸವಣ್ಣನವರು ಹೇಳಿರುವ ಮಾತು ಸಾರ್ವಕಾಲಿಕ ಮೌಲ್ಯ ಉಳ್ಳದ್ದು.

ನುಡಿದರೆ ಮುತ್ತಿನ ಹಾರದಂತಿರಬೇಕು
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು
ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು
ನುಡಿದರೆ ಲಿಂಗವೇ ಮೆಚ್ಚಿ ಅಹುದಹುದೆನಬೇಕು
ನುಡಿಯೊಳಗಾಗಿ ನಡೆಯದಿದ್ದರೆ
ಕೂಡಲ ಸಂಗಮದೇವ ನೆಂತೊಲಿವನಯ್ಯ.

ಮಾತನ್ನು ಹಿತವಾಗಿ, ಮಿತವಾಗಿ, ಸಂದರ್ಭಕ್ಕನುಗುಣವಾಗಿ ಬಳಸಿದರೆ ಜೀವನ ಸುಖ, ಶಾಂತಿ, ಸಂತೋಷದ ಬೀಡಾಗುತ್ತದೆ.

●



# ಅಡಿಕೆ ತೋಟಗಳಲ್ಲಿ ಮೆಣಸನ್ನು ಅಂತರಬೆಳೆಯಾಗಿ ಬೆಳೆಯಿರಿ

—ಐ.ಸಿ.ಎ.ಆರ್. ನವದೆಹಲಿ

ಅಡಿಕೆ ನೀರಾವರಿ ಬೆಳೆಯಾದ್ದರಿಂದ ಇದರ ಜೊತೆ ಹಲವಾರು ಅಂತರ ಬೆಳೆಗಳನ್ನು ಬೆಳೆಯಬಹುದು. ಇವುಗಳಲ್ಲಿ ಮೆಣಸು (ಕರಿಮೆಣಸು) ಹೆಚ್ಚು ಲಾಭಕರ. ಆಡಿಕೆ ಗಿಡಗಳ ಮಧ್ಯ ಅಂತರ ೨.೭ ಮೀ. × ೨.೭ ಮೀ. ಇದ್ದಾಗ ಈ ಮೆಣಸಿನ ಬೆಳೆ ತುಂಬ ಚೆನ್ನಾಗಿ ಬರುತ್ತದೆ. ಏಕೆಂದರೆ ಬೆಳೆಗೆ ಬೇಕಾದ ಗಾಳಿ, ಬೆಳಕು, ಸೂರ್ಯರಶ್ಮಿ ಬೇಕಾದಷ್ಟು ಲಭ್ಯವಾಗುತ್ತದೆ. ಕೇರಳ ಹಾಗೂ ಕರ್ನಾಟಕದಲ್ಲಿ ಅಡಿಕೆ ತೋಟಗಾರರು ಈಗಾಗಲೇ ಮೆಣಸನ್ನು ಲಾಭದಾಯಕವಾಗಿ ಬೆಳೆಯುತ್ತಿದ್ದಾರೆ.

ಮೆಣಸನ್ನು ಅಡಿಕೆ ಗಿಡವು ಐದು ಮೀಟರ್ ಎತ್ತರಕ್ಕೆ ಬೆಳೆದಾಗ ನೆಡಬೇಕಾಗುತ್ತದೆ. ಮೆಣಸಿನ ಬಳ್ಳಿಗೆ ಅಡಿಕೆಮರ ಆಸರೆಯಾಗುತ್ತದೆ. ಆಡಿಕೆಗಿಡದ ಬುಡದಿಂದ ೩೫ ಸೆಂ.ಮೀ. ದೂರದಲ್ಲಿ ೫೦ ಸೆಂ.ಮೀ. ಚದುರದ ಗುಂಡಿಗಳಲ್ಲಿ ಬೇಸಿಗೆಯಲ್ಲಿ ಮಳೆ ಬಿದ್ದಾಗ ಮೆಣಸಿನ ಬಳ್ಳಿ ನೆಡಬೇಕು. ಈ ಗುಂಡಿಗಳಿಗೆ ಸುಮಾರು ೫ ಕಿಲೊ ಕಂಪೋಸ್ಟ್ ಗೊಬ್ಬರ ಮತ್ತು ಎರೆಮಣ್ಣನ್ನು ಬೆರೆಸಬೇಕು. ಪ್ರತಿ ಗುಂಡಿಗೂ ೨-೩ ಮೆಣಸಿನ ಕಡ್ಡಿಗಳನ್ನು ನೆಡಬೇಕು. ಇವು ಬೆಳೆದಾಗ ಬಳ್ಳಿಯನ್ನು ಅಡಿಕೆ ಮರಕ್ಕೆ ಕಟ್ಟಬೇಕು. ಮೆಣಸಿನ ಬಳ್ಳಿಯನ್ನು ೪ ಮೀಟರ್‌ಗೂ ಹೆಚ್ಚು ಎತ್ತರ ಬೆಳೆಯದಂತೆ ನಿಯಂತ್ರಿಸಬೇಕು. ಅಡಿಕೆ ಕುಯಿಲನ್ನಾಗಲಿ, ಮೆಣಸಿನ ಕುಯಿಲನ್ನಾಗಲಿ ಬಳ್ಳಿಗೆ ಧಕ್ಕೆಯಾಗದ ರೀತಿ ಏಣಿಗಳ ಸಹಾಯದಿಂದ ಮಾಡಬೇಕು.

ಗೊಬ್ಬರ: ಒಂದು ಅಡಿಕೆ ಗಿಡಕ್ಕೆ ಪ್ರತಿವರ್ಷ ೧೦೦ ಗ್ರಾಂ ಸಾರಜನಕ, ೪೦ ಗ್ರಾಂ ರಂಜಕ ಹಾಗೂ ೧೪೦ ಗ್ರಾಂ ಪೊಟಾಶ್ ಬೇಕಾಗುತ್ತದೆ; ಜೊತೆಗೆ ೧೨ ಕಿಲೊ ಕೊಟ್ಟಿಗೆ ಗೊಬ್ಬರ ಬೇಕಾಗುತ್ತದೆ ಮೆಣಸಿನ ಬಳ್ಳಿಯೊಂದಕ್ಕೆ ೧೦೦ ಗ್ರಾಂ ಸಾರಜನಕ, ೪೦ ಗ್ರಾಂ ರಂಜಕ ಮತ್ತು ೧೪೦ ಗ್ರಾಂ ಪೊಟಾಶ್ ಹಾಗೂ ೧೦ ಕಿಲೋ ಕೊಟ್ಟಿಗೆ ಗೊಬ್ಬರ ಬೇಕು.

ಎರಡೂ ಬೆಳೆಗೆ ಕೊಡುವ ಜೈವಿಕ (ಕೊಟ್ಟಿಗೆ) ಗೊಬ್ಬರದೊಡನೆ ಮೂರರಲ್ಲಿ ಎರಡು ಭಾಗ ರಸಾಯನಿಕ ಗೊಬ್ಬರಗಳನ್ನು ಅಡಿಕೆ ಗಿಡದ ಬುಡದಿಂದ ೨೫ ಸೆಂ.ಮೀ. ದೂರದ ೧೫ ಸೆಂ.ಮೀ. ಆಳದ ಗೆರೆಗಳಲ್ಲಿ ಹಾಕಬೇಕು. ಎರಡು ವರ್ಷಕ್ಕೊಮ್ಮೆ

(ವರ್ಷ ಬಿಟ್ಟು ವರ್ಷ) ೧ ಕಿಲೊ ಸುಣ್ಣವನ್ನೂ ನೀಡಬೇಕಾಗುತ್ತದೆ. ಉಳಿದ ಒಂದು ಭಾಗ ರಸಾಯನಿಕ ಗೊಬ್ಬರವನ್ನು ಫೆಬ್ರವರಿ-ಮಾರ್ಚಿ ತಿಂಗಳಲ್ಲಿ ಬುಡದಿಂದ (ಮೆಣಸಿನ) ಸುತ್ತಲೂ ೭೫ ಸೆಂ.ಮೀ. ಅಂತರಬಿಟ್ಟು ಹಾಕಬೇಕು. ಇದನ್ನು ಮಣ್ಣಿಗೆ ಸುಮಾರಾಗಿ ಕೆದಕಿ ಸೇರಿಸಬೇಕು.

**ರೋಗ ನಿಯಂತ್ರಣ:** ಅಡಿಕೆಯ ಮಹಳಿ ರೋಗದ ವಿರುದ್ಧ ಬೋರ್ಡೆಕ್ಸ್ ಮಿಶ್ರಣ ಸಿಂಪರಿಸುವಾಗ ಮೆಣಸಿನ ಫಸಲಿಗೂ ಸಿಂಪರಿಸಬೇಕು. ಒಂದು ಮೀಟರ್ ಎತ್ತರದವರೆಗೆ ಬಳ್ಳಿಗೆ ಬೋರ್ಡೆಕ್ಸ್ ದ್ರಾವಣ ಬಳಿಯುವುದರಿಂದ ಬೇರುಕೊಳೆರೋಗ ನಿಯಂತ್ರಿಸಬಹುದು. ತಂತುಹುಳುಗಳ ನಿಯಂತ್ರಣಕ್ಕೆ ವರ್ಷಕ್ಕೆ ಎರಡು ಸಾರಿ, ಮೇ-ಜೂನ್ ಮತ್ತು ಅಕ್ಟೋಬರ್-ನವಂಬರ್‌ನಲ್ಲಿ ಬಳ್ಳಿಯೊಂದಕ್ಕೆ ಒಂದು ಗ್ರಾಂ ಫೋರೇಟ್ ಅಥವಾ ಕಾರ್ಬೋಫ್ಯುರಾನ್ ಹಾಕಬೇಕು.

**ಕುಯಿಲು:** ಮೆಣಸಿನ ಬೆಳೆ ಸಾಮಾನ್ಯವಾಗಿ ಮೇ-ಜೂನ್‌ನಲ್ಲಿ ಹೂವಾಗಿ, ಗುಡ್ಡಗಾಡಿನಲ್ಲಿ ಜನವರಿಯಿಂದ ಮಾರ್ಚಿ ತಿಂಗಳುಗಳಲ್ಲೂ ಬಯಲು ಪ್ರದೇಶಗಳಲ್ಲಿ ಸ್ವಲ್ಪ ತಡವಾಗಿಯೂ ಕುಯಿಲಿಗೆ ಬರುತ್ತದೆ. ಗೊಂಚಲಿನ ಕೊನೆಯ ಒಂದೆರಡು ಕಾಯಿಗಳು ಕೆಂಪಾಗಿ ಹಣ್ಣಾದಾಗ ಕುಯಿಲು ಮಾಡಲಾಗುತ್ತದೆ. ಇದನ್ನು ೩-೪ ಬಾರಿ ಮಾಡಬೇಕಾಗುತ್ತದೆ. ಕೈಗಳಲ್ಲಿ ಉಜ್ಜಿ ಅಥವಾ ಕಾಲುಗಳಿಂದ ತುಳಿದು ಮೆಣಸನ್ನು ಗೊಂಚಲಿನಿಂದ ಬೇರ್ಪಡಿಸಬೇಕಾಗುತ್ತದೆ. ಬಳಿಕ ೭-೧೦ ದಿನ ಬಿಸಿಲಿನಲ್ಲಿ ಮೆಣಸನ್ನು ಒಣಗಿಸಬೇಕಾಗುತ್ತದೆ. ತೇವಾಂಶ ಶೇ. ೧೧ಕ್ಕೆ ಬರುವವರೆಗೂ ಒಣಗಿಸಬೇಕು, ತೂರಿ, ಕೇರಿ ಸ್ವಚ್ಛಮಾಡಿ, ಜರಡಿಯಾಡಿ ವಿಂಗಡಿಸಬೇಕಾಗುತ್ತದೆ. ಮೆಣಸಿನ ಹಣ್ಣನ್ನು ಮಂಕರಿಯಲ್ಲಿಟ್ಟು ಕುದಿಯುವ ನೀರಿನಲ್ಲಿ ಒಂದು ನಿಮಿಷದವರೆಗೆ ಅದ್ದಿ ತೆಗೆದಾಗ ಬೇಗ ಒಣಗುತ್ತದೆ.

ಕಪ್ಪು ಮೆಣಸಿಗಿಂತ ಬಿಳಿ ಮೆಣಸಿಗೆ ಹೊರದೇಶದ ಮಾರುಕಟ್ಟೆಗಳಲ್ಲಿ ಶೇ. ೪೦ರಷ್ಟು ಹೆಚ್ಚು ಬೆಲೆ ಸಿಗುತ್ತದೆ. ಚೆನ್ನಾಗಿ ಹಣ್ಣಾದ ಮೆಣಸಿನ ಹಣ್ಣುಗಳನ್ನು ಗೋಣಿಚೀಲಗಳಲ್ಲಿ ತುಂಬಿ ಏಳು ದಿನಗಳವರೆಗೆ ಹರಿಯುವ ನೀರಿನಲ್ಲಿಟ್ಟು, ಬಳಿಕ ಬಕೆಟ್‌ನಲ್ಲಿನ ನೀರಿನಲ್ಲಿ ಕೈಯಿಂದ ಕೊಸರಿ ಮೆಣಸಿನ ಹೊರಸಿಪ್ಪೆಯನ್ನು ತೆಗೆದು ೩-೪ ದಿನ ಒಣಗಿಸಿ, ಕೇರಿ, ತೂರಿ, ಜರಡಿಯಾಡಿ, ಬಟ್ಟೆಯಿಂದ ಉಜ್ಜಿ ಮೆರಗು ಕೊಟ್ಟು ಬಿಳಿ ಮೆಣಸನ್ನು ತಯಾರಿಸಲಾಗುತ್ತದೆ. ಮೆಣಸಿನಿಂದ ತಯಾರಿಸಿದ ಹಸಿರು (ಡಬ್ಬೀಕೃತ) ಮೆಣಸು, ಒಣ ಹಸಿರು ಮೆಣಸು, ಮೆಣಸಿನ ಎಣ್ಣೆ ಹಾಗೂ ಮೆಣಸಿನ ಓಲಿಯೋ ರೆಸಿನ್ ಇವನ್ನು ಹೊರದೇಶದ ಮಾರುಕಟ್ಟೆಗೆ ಕಳಿಸಲಾಗುತ್ತದೆ. ಬಿಳಿ ಮೆಣಸನ್ನು ಯಾವುದೇ ಸಾಧನ-ಸಲಕರಣೆಗಳಿಲ್ಲದೆ, ಯಾವುದೇ ತೊಡಕಿನ ತಂತ್ರಜ್ಞಾನವಿಲ್ಲದೇ ತಯಾರಿಸಬಹುದು.



**ಇಳುವರಿ:** ೨.೭×೨.೭ ಮೀ. ಅಂತರದಲ್ಲಿನ ಅಡಿಕೆ ತೋಟದಲ್ಲಿ ೧೩೦೦ ಮೆಣಸಿನ ಬಳ್ಳಿ ಇಡಲು ಸಾಧ್ಯ. ನಾಲ್ಕು ವರ್ಷ ಕಳೆದ ಮೇಲೆ ಪ್ರತಿ ಬಳ್ಳಿಗೂ ಒಂದು ಕಿಲೋ ಮೆಣಸಿನ ಉತ್ಪಾದನೆ ಸಾಧ್ಯ. ಎಂದು ಕಿಲೋ ಮೆಣಸಿನ ಉತ್ಪಾದನೆಗೆ ರೂ. ೧೨/- ತಗುಲಿದರೂ ಹೆಕ್ಟೇರಿಗೆ ರೂ. ೧೫,೬೦೦/- ಹೆಚ್ಚಿನ ಆದಾಯ ಬರುತ್ತದೆ. ಮೆಣಸಿನ ಬಳ್ಳಿಯನ್ನು ನೆಡಲು ಬೀಜದ ಕಡ್ಡಿಗಳನ್ನು ಒದಗಿಸಿಯೇ ರೂ. ೨೦೦೦/- ಗಳಿಸಬಹುದು. ಈ ಇಳುವರಿ ಏಳನೆ ವರ್ಷ ದ್ವಿಗುಣಗೊಳ್ಳುತ್ತದೆ. ಅಂದರೆ ಅಡಿಕೆ ತೋಟದಲ್ಲಿ ಮೆಣಸನ್ನು ಬೆಳೆದು ವರ್ಷಕ್ಕೆ ಹೆಕ್ಟೇರಿಗೆ ರೂ. ೧೭,೬೦೦/-ಕ್ಕೂ ಹೆಚ್ಚು ಗಳಿಸಬಹುದು. ಖರ್ಚು ರೂ. ೯,೬೦೦/- ಎಂದು ಇಟ್ಟುಕೊಂಡರೂ ನಿವ್ವಳ ಆದಾಯ ರೂ. ೮,೦೦೦/- ನ್ನು ಗಿಟ್ಟಿಸಬಹುದು.

**ಉತ್ತಮ ತಳಿಗಳು:** ವಿಠ್ಠಲ್‌ನ ತೋಟಗಾರಿಕೆ ಬೆಳೆಗಳ ಸಂಶೋಧನಾ ಸಂಸ್ಥೆಯಲ್ಲಿ ನಡೆಸಿದ ಪ್ರಯೋಗಗಳ ಪ್ರಕಾರ 'ಮಲ್ಲಿಗೆ ಸರ' ಮತ್ತು 'ಉದ್ದಕರೆ'ಗಿಂತ 'ಪನ್ನಿಯಾರ್-೧' ಮತ್ತು 'ಕರಿಮುಂಡ' ಮೆಣಸಿನ ತಳಿಗಳು ಅಡಿಕೆ ತೋಟದಲ್ಲಿ ಅಂತರ ಬೆಳೆಯಾಗಿ ಬೆಳೆಯಲು ಹೆಚ್ಚು ಸೂಕ್ತ. ಅಡಿಕೆ ಇಳುವರಿಯೂ ಕುಂಠಿತವಾಗಿಲ್ಲ. 'ಕರಿಮುಂಡ' ತಳಿಯಿಂದ ೪,೫೮೨ ಗ್ರಾಂ, 'ಪನ್ನಿಯಾರ್-೧' ತಳಿಯಿಂದ ೩,೨೨೭ ಗ್ರಾಂ, 'ಮಲ್ಲಿಗೆ ಸರ' ತಳಿಯಿಂದ ೧,೬೫೨ ಗ್ರಾಂ ಮತ್ತು 'ಉದ್ದಕರೆ' ತಳಿಯಿಂದ ೨೦೦ ಗ್ರಾಂ ಇಳುವರಿ ಬಂದಿದೆ.

# ಶರಣರು ಮತ್ತು ಕಲಾಪ್ರಕಾರಗಳು

—ಎಂ. ಎ. ನೀಲಾಂಬಿಕಾ

ಮಾನವ ಬುದ್ಧಿಜೀವಿ. ಅವನ ಬೌದ್ಧಿಕ ಚಟುವಟಿಕೆಗಳು ಏಕಮುಖವಾದುದಲ್ಲ. ಅದು ವಿಚಾರಾತ್ಮಕವಾದುದು. ಅಂತಯೇ ಭಾವಾತ್ಮಕವಾದುದು. ಈ ಭಾವಾತ್ಮಕವಾದ ಚಟುವಟಿಕೆಯಲ್ಲಿ ಭಕ್ತಿ, ಸಾಹಿತ್ಯ, ಕಲೆ, ಶ್ರದ್ಧೆ ಇವೆಲ್ಲವೂ ನಿರೂಪಿತವಾಗಿರುತ್ತದೆ. ಇವುಗಳಲ್ಲಿ ಕಲೆಯು ನಾಟಕ, ಸಂಗೀತ, ನೃತ್ಯ ಇವುಗಳ ಸಮಷ್ಟಿಯಾಗಿರುತ್ತದೆ.

“ಕಲೆ ಜೀವನದ ಶೃಂಗಾರ ಸಂಸ್ಕೃತಿಯ” ಬಂಗಾರ. ಕಲೆಯ ಬೆಳವಣಿಗೆ ಒಂದು ಶಾಸ್ತ್ರದ ಉಳಿವನ್ನೆ ಒಳಗೊಂಡಿರುತ್ತದೆ. ಕಲೆ ಇಂದು ರೂಪಿತವಾದುದಲ್ಲ. ಬಹಳ ಪ್ರಾಚೀನವಾದುದು. ದೇವತೆಗಳು ಸಹ ಈ ಕಲೆಗೆ ಮಾರುಹೋಗಿದ್ದರು. ಇದಕ್ಕೆ ನಿದರ್ಶನ ಶಿವ ತಾಂಡವ ನೃತ್ಯವಾಡಿ ನಟರಾಜ ಎನಿಸಿಕೊಂಡುದು, ಕಲೆಗೆ ಆರಾಧ್ಯದೈವ ಎನಿಸಿಕೊಂಡುದು, ನಂದಿ ಷಣ್ಮುಖರ ಮದ್ದಳೆ ನಾದ, ಶಾರದೆಯ ವೀಣೆಯ ಇಂಚರ ಇವುಗಳಿಗೆ ಪೋಷಕವೆನಿಸಿದ ಭೃಂಗಿಯ ನೃತ್ಯ, ಎಲ್ಲವೂ ಪುರಾಣ ಪ್ರಸಿದ್ಧವಾದುದು. ಈ ಕಲೆಯೇ ಅಂದಿನಿಂದ ಇಂದಿನವರೆಗೆ ಬೆಳೆದು ಬಂದಿದೆ. ಪ್ರಸ್ತುತ ಪ್ರಾಚೀನವಾದ ಈ ಕಲೆಯನ್ನು 12 ನೇ ಶತಮಾನದಲ್ಲಿ ಶರಣರು ಹೇಗೆ ಕಾಯಕವನ್ನಾಗಿ ಅವಲಂಬಿಸಿದ್ದು, ಹೇಗೆ ಅದನ್ನು ಆಧ್ಯಾತ್ಮಿಕ ನೆಲೆಗೇರಿಸಿದ್ದರೆಂಬುದನ್ನು ತಿಳಿಸಿದ್ದೇನೆ.

12 ನೇ ಶತಮಾನದಲ್ಲಿ ಶರಣರು ದಿಕ್ಕೆಟ್ಟ, ಕಂಗೆಟ್ಟ ಜನರನ್ನು ತಿದ್ದುವ ಸಲುವಾಗಿ ಈ ಮಾಧ್ಯಮಗಳನ್ನು ಬಳಸಿಕೊಂಡರು. ನಿಜ ವಿಶಾಲ ಧರ್ಮತತ್ವವನ್ನು ಕಲೆಯ ಮೂಲಕ ಪಡಿಮೂಡಿಸಿದಾಗ ಆ ತತ್ವ ಸಾಮಾನ್ಯ ಜನತೆಗೆ ಅರಿಯಲು ಸಾಧ್ಯವಾಯಿತು. ಆಯಾ ಸನ್ನಿವೇಶಕ್ಕೆ ತಕ್ಕಂತೆ ವೇಷಗಳನ್ನು ಧರಿಸಿ ಸರಳವಾದ ಸಾಹಿತ್ಯ ಬಳಸಿ ಅಭಿನಯಿಸಿದಾಗ ಜನರ ಮನದಲ್ಲಿ ಅಚ್ಚಳಿಯದೆ ಉಳಿಯುತ್ತದೆ. ಆ ಕಾರಣ ದೇಶದ ವಿವಿಧ ಭಾಗಗಳಿಂದ ಬಸವಣ್ಣನ ಕಾರ್ಯಕ್ಷೇತ್ರಕ್ಕೆ ಬಂದ ಶರಣರು ಕಲಾವಿದರೂ ಆದ್ದರಿಂದ ಈ ಮಾಧ್ಯಮವನ್ನು ಬಳಸಲು ಸಾಧ್ಯವಾಯಿತು.

ಕಲ್ಯಾಣದಲ್ಲಿ ಪ್ರತಿಯೊಬ್ಬನೂ ಯಾವುದಾದರೊಂದು ಕಾಯಕವನ್ನು ಅನುಸರಿಸಲೇಬೇಕಿತ್ತು. ಪರಿಣಾಮವಾಗಿ ಒಂದು ಕಾಲದಲ್ಲಿ ಕೀಳಾಗಿ ಕಾಣುತ್ತಿದ್ದ



ವೃತ್ತಿಗಳೆಲ್ಲ ಕಾಯಕವೆನಿಸಿ ಪರಮಾತ್ಮನನ್ನು ಕಾಣಲು ಸಾಧನವಾದವು. ಕಾಯಕದ ತಳಹದಿಯ ಮೇಲೆ ಕಟ್ಟಿದ ಶರಣ ಸಮಾಜ ಸ್ವಾವಲಂಬಿ ಸಮಾಜ. ಅಲ್ಲಿ ಮೇಲುಕೀಳಿಲ್ಲ. ಶ್ರೀಮಂತ ಬಡವರೆಂಬ ತಾರತಮ್ಯವಿಲ್ಲ. ಅವರು ಅನುಸರಿಸಿದ ಕಾಯಕಗಳಲ್ಲಿ ಸರ್ವಕಲೆಗಳೂ ಸೇರಿತ್ತು. ನೃತ್ಯ, ಹಾಸ್ಯ, ಗಮಕ, ಸಂಗೀತ, ನಾಟಕ ಎಲ್ಲ ಕಲೆಗಳಲ್ಲೂ ಮುಂದಿದ್ದರು. ಹೆಸರಿನೊಡನೆ ಕಾಯಕ ಸೇರಿಕೊಂಡಿತು. ಉದಾ: ಕಿನ್ನರಿಬ್ರಹ್ಮಯ್ಯ, ರಾಗದ ಸಂಕಣ್ಣ ಇತ್ಯಾದಿ.

**ಸಂಗೀತ ಕಲೆ:** ಸಂಗೀತ ಕಲೆಗಳಲೆಲ್ಲ ಅತ್ಯಂತ ಪ್ರಾಚೀನವಾದುದು. ಸಾಮವೇದವೇ ಇದಕ್ಕೆ ಸಾಕ್ಷಿ. ಸಂಗೀತ, ಮತ್ತು ಭಕ್ತಿ ಎರಡರ ಸಂಗಮಗೊಳಿಸಿದ ಕೀರ್ತಿ ಶರಣರಿಗೆ ಸೇರಿದ್ದು. ಸಂಗೀತ ಶರಣರಿಗೆ ಕರತಲಾಮಲಕವಾಗಿತ್ತು. ಅವರ ವಚನಗಳನ್ನು ನೋಡಿದಾಗ ಅವರಿಗಿದ್ದ ರಾಗದ ಕಲ್ಪನೆ ಅರಿವಾಗದಿರದು. ಶರಣರ ವಚನಗಳು ಹೇಗೆ ಸಂಗೀತಾತ್ಮಕವಾಗಿದೆ ಎಂಬುದನ್ನು ಡಾ|| ಎಲ್ ಬಸವರಾಜುರವರ ಶಿವದಾಸ ಗೀತಾಂಜಲಿಯಲ್ಲಿ ಕಾಣಬಹುದಾಗಿದೆ. ಬಸವಣ್ಣನವರು

ಎನ್ನ ಕಾಯವ ದಂಡಿಗೆಯ ಮಾಡಯ್ಯ
ಎನ್ನ ನರವ ತಂತಿಯ ಮಾಡಯ್ಯ
ಎನ್ನ ಶಿರವ ಸೋರೆಯ ಮಾಡಯ್ಯ
ಎನ್ನ ಬೆರಳ ಕಡ್ಡಿಯ ಮಾಡಯ್ಯ
ಬತ್ತೀಸರಾಗವ ಹಾಡಯ್ಯ —ಎಂದು ತಮ್ಮ

ದೇಹವನ್ನು ದಂಡಿಗೆಯಾಗಿಸಿ ಮೂವತ್ತೆರಡು ರಾಗದಿಂದ ಹಾಡುವೆ ಎಂದಿದ್ದಾರೆ.

ರಾಗದ ಸಂಕಣ್ಣ ವಿವಿಧ ರಾಗದ ಮೂಲಕ ಹಾಡನ್ನು ಹಾಡುವ ಕಾಯಕವನ್ನು ಹೊಂದಿದ್ದವ. ಪ್ರತಿದಿನ ಶಿವಾಲಯಕ್ಕೆ ಹೋಗಿ ಭಾವಪರವಶತೆಯಿಂದ ಹಾಡುವುದು. ಇವನ ದೈನಂದಿನ ಕಾರ್ಯಕ್ರಮ. ಇವನ ಗಾನಮಾಧುರ್ಯಕ್ಕೆ ಸೋತ ಕಲ್ಯಾಣ ಚಾಲುಕ್ಯರ ದೊರೆ ವಿಕ್ರಮಾಂಕ ತನ್ನ ಆಸ್ಥಾನದ ವಿದ್ವಾಂಸನನ್ನಾಗಿ ನೇಮಿಸಿಕೊಳ್ಳುತ್ತಾನೆ. ರಾಜನು ಪ್ರತಿನಿತ್ಯ ಕೊಡುತ್ತಿದ್ದ ೧೨ ವರಹಗಳಿಂದ ದಾಸೋಹವನ್ನು ಮಾಡುತ್ತಿದ್ದನು. ಒಮ್ಮೆ ಗೌಳದೇಶದ ಗಾಯಕನಿಗೂ ಇವನಿಗೂ ಸ್ಪರ್ಧೆ ನಡೆದು ಸಂಕಣ್ಣನೇ ಗೆದ್ದು ರಾಜನಿಂದ ರಾಗರಸಾಂಕನೆಂಬ ಬಿರುದನ್ನು ಪಡೆಯುತ್ತಾನೆ.

ಬಹುರೂಪಿ ಚೌಡಯ್ಯನಿಗೆ ರಾಮಪ್ರಿಯರಾಗವೆಂದರೆ ಅಚ್ಚುಮೆಚ್ಚು. ಒಮ್ಮೆ ದಾಸೋಹ ಮಾಡಲು ಆ ರಾಗವನ್ನು ಒತ್ತೆಯಿಟ್ಟು ಶಿವನೇ ಬಂದು ಕೇಳಿದ್ದರೂ ಗಡವು ಮುಗಿಯುವ ತನಕ ಹಾಡದೆ ನಂತರ ಆತನನ್ನು ಮೆಚ್ಚಿಸಿ ಕೈಲಾಸಕ್ಕೆ ಕರೆ

ಹಾಗೆ— "ಬೇಡೆನಗೆ ಕೈಲಾಸ ನೀಡೆನಗೆ ಶಿವಭಕ್ತಿ" ಎಂದು ಹೇಳಿದ ಕಲಾವಿದ ಈತ.

ಶರಣ ಗಜೇಶಮಸಣಯ್ಯನಿಗೆ- "ಬೇಶಾಕ್ಷಿಯಿಲ್ಲದ ರಾಗ ಉಪ್ಪಿಲ್ಲದ ಊಟದಂತೆ ರುಚಿಸದು" ಏಕೆಂದರೆ ಅದು ತುಂಬುರನಾರದರು ಶಿವನ ಕೇಳಿಸುವರಾಗಳಷ್ಟೇ ಅಲ್ಲ. ಮಹಾಲಿಂಗ ಗಜೇಶ್ವರನ ನೆಚ್ಚಿನರಾಗ. ವೀರದೇವಮ್ಮ ಭಕ್ತರಿಗೆ ವಚನಗಳನ್ನು ಹಾಡಿದಲ್ಲದೆ ಅರ್ಥವಾಗುವಂತೆ ವಿವರಿಸುತ್ತಿದ್ದಳು. ಆಕೆಯನ್ನು ಉಗ್ಗಡಿಸುವ ಕನ್ಯೆ ವೀರದೇವಿ ಎನ್ನುತ್ತಿದ್ದರು.

**ವಾದ್ಯ ವಾದನ:-** ಹಾಡುವುದರ ಜೊತೆಗೆ ಹಿಮ್ಮೇಳವಿದ್ದರೆ ಸುವರ್ಣದ ಚೌಕಟ್ಟಿದ್ದಂತೆ. ಅಂತೆಯೇ ಶರಣರು ವೇದಗಳಲ್ಲಿ ಉಕ್ತವಾಗಿರುವ ವೀಣ, ಕಂಕರಿ ದುಂದುಭಿ ಮುಂತಾದ ವಾದ್ಯಗಳನ್ನು ನುಡಿಸಿ ಶಿವನನ್ನು ಒಲಿಸಿಕೊಂಡರು. ಸಕಲೇಶ ಮಾದರಸನ ವೀಣೆ, ಕಕ್ಕಯ್ಯನ ಕಂಕರಿ, ಬ್ರಹ್ಮಯ್ಯನ ಕಿನ್ನರಿ. ಅವರ ಹೆಸರೊಡನೆ ಕಾಯಕವು ಬೆರತು ಹೋದವು.

ಸಕಲೇಶ ಮಾದರಸನು ರಾಗಭಾವಕ್ಕೆ ತಕ್ಕಂತೆ ಮೂವತ್ತೆರಡು ರಾಗಗಳನ್ನು ನುಡಿಸುವುದರಲ್ಲಿ ನಿಪುಣನಾಗಿದ್ದನು.

ತಾಳ ಮುರುನಾಟ ಶಂಕರಾಭರಣಂ
ಬಂಗಾಳಂ ಗುರ್ಜರಿ ತೋಡಿವ
ರಾಳಿಕೆ ಕಲ್ಯಾಣಿ ದೇಶ ಕನ್ನಡರಾಗಂ
-ಪಾಳವ ಮಾಶ್ರೀರಾಗಂ

ಇವೇ ಮುಂತಾದ ರಾಗಗಳ ಮೂಲಕ ವೀಣೆಯನ್ನು ನುಡಿಸಿಮುರಾರಿಯನ್ನು ಮೆಚ್ಚಿಸುತ್ತಿದ್ದನು. ಭೈರವೇಶ್ವರ ಕಥಾಮಣಿ ಸೂತ್ರ ರತ್ನಾಕರದಲ್ಲಿ ಈತ- ಲಿಂಗಪೂಜೆಯಂ ಮಾಡಿದ ಬಳಿಕ ಲಿಂಗಕ್ಕೆ ವೀಣೆಯಿಂದ 'ಮೂವತ್ತೆರಡು ರಾಗದಿಂ ಅರವತ್ತನಾಲ್ಕು ಗೀತ ಎಂಬತ್ತೆಂಟು ಪ್ರಬಂಧ, ನೂರೊಂದು ತಾಳಂ' ಇವೇ ಮೊದಲಾದವನ್ನು ಲಿಂಗಕ್ಕೆ ಕೇಳಿಸಿ ಪೂಜಿಸುತ್ತಿದ್ದನೆಂದು ಉಕ್ತವಾಗಿದೆ. ಹೀಗೆ ರಾಜನಾಗಿದ್ದು ಕ್ಷಣಿಕವಾದ ಅಷ್ಟವೈಭವಗಳನ್ನು ದಿಕ್ಕರಿಸಿ ಶಾಶ್ವತ ಸುಖವನ್ನು ಪಡೆಯಲು ಕಲಾಸಕ್ತನಾದವನು.

ಕಿನ್ನರಿ ಬೊಮ್ಮಯ್ಯ, ಬಾರಿಸಲು
ಕುನ್ನಿಹಸು ಮರೆತು ಕಿವಿಗೊಟ್ಟು ಕಲ್ಯಾಣ
ಚೆನ್ನಾತು ಲೋಕ ಚೆಲುವಾತು

ಜಾನಪದ ಕವಿಯ ಈ ಗಾನವನ್ನು ಆಲಿಸುತ್ತಿದ್ದಂತೆ ತ್ರಿಪುರಾಂತಕೇಶ್ವರನ ದೇವಾಲಯದಲ್ಲಿ ಕಿನ್ನರಿಯನಾದ ಅಲೆ ಅಲೆಯಾಗಿ ತೇಲಿಬರುತ್ತದೆ. ಯಾರದಿರ-



ಬಹುದು ಈ ನಾದಲಹರಿ? ತನ್ನ ನಾದದಿಂದ ಶಿವನನ್ನು ಮೆಚ್ಚಿಸಿ ಅವನಿಂದ ದಿನಾಲು ಒಂದೊಂದು ಹೊನ್ನನ್ನ ಪಡೆದು ದಾಸೋಹ ಮಾಡುತ್ತಿದ್ದ. ಕಿನ್ನರಿಬ್ರಹ್ಮಯ್ಯನದು ಒಮ್ಮೆ-ಒಂದು ಹರಕೆಯ ಕುರಿ ದೇವಾಲಯಕ್ಕೆ ಬಂದು ಈತನನ್ನು ಮೊರೆಯುಡಲು ಅದನ್ನು ರಕ್ಷಿಸಲು ಅದರ ಯಜಮಾನನೇ ಕೊಂದು ಕೊನೆಗೆ ಆತನಿಗೆ ಜೀವದಾನ ಮಾಡಿ ಶಿವನ ಮೂಲಕ ಸಾಕ್ಷಿ ಹೇಳಿಸಿದ ಶಿವಶರಣ ಕರುಣಾಮಯಿ. ಇರಬಹುದು. ಶಿವನಿಂದ ಹಾಗವನ್ನು ಪಡೆಯುತ್ತಿದ್ದೇನೆಂಬ ಅಹಂಕಾರ ಇವನಲ್ಲಿ ಎಂದರಿತ ಶರಣ ಕಲಕೇತ ಬ್ರಹ್ಮಯ್ಯ ಸುಮ್ಮನೆ ಬಿಡುವನೇ? ಆತನನ್ನು ಖಂಡಿಸಿ

ಬೇಡಲೇತಕೆ ಕಾಯಕವ ಮಾಡುವೆನೆಂದು
ಕೊಡದೊಡೆ ಒಡಗೂಡಿ ಬಯ್ಯಲೇತಕ್ಕೆ

ಎಂದು ಹೇಳುತ್ತ ಆತನನ್ನು ಎಚ್ಚರಿಸುತ್ತಾನೆ. ಒಬ್ಬ ಕಲಾವಿದನು ಇನ್ನೊಬ್ಬ ಕಲಾವಿದ ತಪ್ಪು ಮಾಡಿದಾಗ ಅವನನ್ನು ಎಚ್ಚರಿಸಬೇಕೆಂಬುದಕ್ಕೆ ಈತ ನಿದರ್ಶಿತವಾಗಿದ್ದಾನೆ.

ಕಂಕರಿ ನುಡಿಸಲು ಕಕ್ಕಯ್ಯ ಸೋತಾನೋ
ಕುಣಿಯಲು ಜಂಗಮ ಸೋತಾನೋ

ಎಂದು ಜನ ಅಚ್ಚರಿಯಿಂದ ನೋಡುತಿರಲು ಸತತ ಮೂರು ದಿನಗಳ ಕಾಲ ಪಂದ್ಯ ನಡೆದು ಶಿವನ ಕುಣಿತ ನಿಂತರೂ ಕಿಂಕರಿಯ ಧ್ವನಿ ನಿಲ್ಲಲಿಲ್ಲ. ಶಿವನನ್ನೇ ಕಲೆಗೆ ಆರಾಧ್ಯ ದೈವನನ್ನೆ ಸೋಲಿಸಿದ ಶರಣನಾರು? ಕಂಕರಿಕಕ್ಕಯ್ಯ. ಕಿಂಕರಿ ಚೌಡಿಕೆಯಂಥ ವಾದ್ಯ ಇದನ್ನು ಬಾರಿಸಿಕೊಂಡು ಕುಣಿದು ಶಿವಭಕ್ತಿ ಬೀಜವನ್ನು ಜನರ ಮನದಲ್ಲಿ ಬಿತ್ತುವ ಕಾಯಕ ಕಕ್ಕಯ್ಯನದು.

ಅಹಂಕಾರವೆಂಬ ಆತ್ಮ ಫಲದ ಮಾರಿಯನ್ನು
ಉಲುಹೆಂಬ ಡಕ್ಕೆಯನ್ನು ಪಿಡಿದು
ಭವವೆಂಬ ಬಾಗಿಲಲ್ಲಿ ತಿರುಗಾಡುತಲಿದ್ದೇನೆ
ಢಕ್ಕೆಯ ದನಿ ಬಿಡಿಸಾ

ಎಂದು ಹೇಳುತ್ತ ಮನೆ ಮನೆಯ ಮುಂದೆ ನಿಂತು ಕಾಲವೆಂಬ ಮಾರಿಯನ್ನು ಗೆಲ್ಲಬೇಕೆಂದು ಸಾರುತ್ತಿರುವ ದನಿ ಮಾರಯ್ಯನದು. ಉಡಿಗೆ ಬೇವಿನ ಸೊಪ್ಪನ್ನು ಕಟ್ಟಿಕೊಂಡು ತಲೆಯಮೇಲೆ ಮಾರಿಯನ್ನು ಹೊತ್ತು ಶರಣರ ಮನೆಗೆ ಬರುವ ಕಾಯಕ ಈತನದು. ಕ್ರೌರ್ಯದ ಸಂಕೇತವಾದ ಈತನ ಮಾರಿ ಕ್ರೌರ್ಯದ ಸಂಕೇತವಲ್ಲ, ಜ್ಞಾನದ ಸಂಕೇತ. ಢಕ್ಕೆಯನ್ನು ಬಾರಿಸುವುದಾದರೂ ಜನತೆಯನ್ನು ಒಂದೆಡೆ ಸೇರಿಸಿ ಅವರಿಗೆ ಅರಿವಿನ ಮಾರ್ಗ ಬಿತ್ತರಿಸಲು ವಚನಗಳನ್ನು ರಚಿಸಿ ಜನರ ಮನ ಸಂಸ್ಕಾರಗೊಳಿಸುವವನು. ಕಾಲವೆಂಬ ಮಾರಿಯನ್ನು ಗೆಲ್ಲಬೇಕೆಂದು ಹೇಳುತ್ತಿದ್ದನು. ಅಂತೆಯೇ

ಬಾಹೂರ ಬ್ರಹ್ಮಯ್ಯನ ತಾಳವೂ ಕೂಡ ಶಿವನಿಗೆ ಮೆಚ್ಚಿಗೆಯಾದುದು.

ನೃತ್ಯ :— ನೃತ್ಯ ಕಲೆಯು ಮತ್ತೊಂದು ಪ್ರಕಾರ : ನೃತ್ಯ ಮಾಡುತ್ತಲೆ ಜನತೆಯಲ್ಲಿಯ ಲೋಪದೋಷಗಳನ್ನು ತಿದ್ದಿದರು ಶರಣರು, ಮೋಸಗಾರರಿಗೆ, ಸೋಮಾರಿಗಳಿಗೆ ಸವಾಲಿದ್ದಂತಿದ್ದ ಘಟ್ಟಿವಾಳಯ್ಯ, ಬಹುರೂಪಿಚೌಡಯ್ಯ ಸಿದ್ಧದೇವಮ್ಮ ಇವರೇ ಮುಂತಾದ ಶರಣರು ಈ ಕಾಯಕವನ್ನು ಅನುಸರಿಸಿದ್ದರು. ಮೋಸದ ಜನತೆಗೆ ಸಿಂಹ ಸ್ವಪ್ನವಾಗಿದ್ದ ಘಟ್ಟಿವಾಳಯ್ಯ ನೃತ್ಯಕ್ಕೆ ನಿಂತರೆ ನಟರಾಜನನ್ನೇ ಭುವಿಗಿಳಿದುಬಂದಂತೆ ಮದ್ದಳೆಯನ್ನಿಡಿದರೆ ಶಿವನನ್ನೇ ಕುಣಿಸುವ ಕಲಾವಿದನೀತ.

ಘಟ್ಟಿವಾಳಯ್ಯನ ಹಿಂದಣ ಹೆಸರು ಮುದ್ದಣ ಎಂದು ಈತನ ಜೀವನದಲ್ಲಿ ನಡೆದ ಘಟನೆ ಆತನ ಮನ ಪರಿವರ್ತಿಸಿತು.

"ಹೊನ್ನು ಹೆಣ್ಣು ಮಣ್ಣು ತನ್ನದೆಂಬುವ ಮೂರ್ಖ ;
ಹೊನ್ನು ಭೂಪಾಲತೆ ಹೆಣ್ಣೊಲಿದ ಕಾಮುಕನೇ ;
ಮಣ್ಣು ಬಲವಂತಗಲ್ಲದೆ ಬರಿಯ ಭ್ರಾಂತಿಯಲ್ಲ"

ಎಂದು ಸಾರುತ್ತ ವಿಶ್ವಕುಟುಂಬಿಯಾಗಿ ಕಲ್ಯಾಣಕ್ಕೆ ಬಂದು ನೃತ್ಯ ಕಾಯಕವನ್ನು ಅನುಸರಿಸುತ್ತ ಬಸವಣ್ಣ ಮಹಾಮನೆಗೆ ಬರುವ ವೇಷಗಾರ ಜಂಗಮರನ್ನು ಟೀಕಿಸುತ್ತ ಅವರು ತಿರುಗಿಬಿದ್ದರೂ ಕೆಚ್ಚದೆಯಿಂದ ಎದುರಿಸಿ ಅವರ ಮನ ಪರಿವರ್ತಿಸಿದವ. ಇಂಥ ಕೆಚ್ಚು ಕಲಾವಿದನಲ್ಲಿರಬೇಕು.

ಕಣ ಕಣಿಸಿ ಕರಡಿಗಳು ಝಣ ಝಣಿಸಿ ತಾಳಗಳು
ಥಣ ಥಣ ದಿತ್ತಮುತ್ತಲೆಯು ಕಿವಿಯೊಳಗೆ : ಕುಂಬಾರ

ಗುಂಡಯ್ಯನ ನೃತ್ಯದ ಕಾಲ್ದನಿ ಕೇಳುತ್ತಿದ್ದಂತೆ,

" ಧಿಮ್ಮಯ್ಯ ಧಿತ್ತಯ್ಯ ಢಮ್ಮಡಿಯು ಧುಮ್ಮೆಂದು
ಕಣ ಕಣಿಸಿ ಕುಣಿತನೊಳು ಝುಮ್ಮೆನ್ನುವಂತೆ :

ಬಹುರೂಪಿ ಚೌಡಯ್ಯನವರ ಗೆಜ್ಜೆಯ ದನಿ ಕೇಳಿಬರುತ್ತದೆ. ಚಿಕ್ಕಂದಿನಿಂದಲೂ ನೃತ್ಯದಲ್ಲಿ ಆಸಕ್ತಿಯಿದ್ದ ಚೌಡಯ್ಯ ಬಹುರೂಪಧರಿಸಿ ಜನರನ್ನು ಸಂತೋಷ ಪಡಿಸುತ್ತ ಜಂಗಮಾರ್ಚನೆ ಮಾಡುತ್ತಿರುತ್ತಾನೆ. ಹೀಗೆ ಶಿವಭಕ್ತಿಯನ್ನುಳಿಸಿ ಬೆಳೆಸಿದ ಕೀರ್ತಿ ಈತನದು. ಬಂದ ಬಹುರೂಪಿನಲಿ ಸಂದಿಲ್ಲದೆ ಆಡುತ್ತ ಬಂದ ಬಂದವರ ಮೆಚ್ಚಿಸುತ ಬಾಳಿದವನು.

ಇದರ ಜೊತೆಗೆ ಕೋಡಂಗಿಯಾಟ, ಕಥೆ ಹೇಳುವುದು, ಡೊಂಬರಾಟ ಮುಂತಾದ



ಜಾನಪದ ಕಲೆಗಳನ್ನು ಕಾಯಕದ ನೆಲೆಗೇರಿಸಿದರು. ಶಿವಮಾಯಾದೇವಿ ಕಥೆ ಹೇಳುವುದರಲ್ಲಿ ನಿಪುಣೆ. ನಗೆಯ ಮಾರಿ ತಂದೆ ತನ್ನೆದುರಿಗೆ ಯಾರೇ ಸಿಕ್ಕಲಿ ಅವರನ್ನು ನಗಿಸುವುದೇ ಇವನ ಕಾಯಕ. ಹಾಗೆ ಅವರನ್ನು ನಕ್ಕು ಹೋಗಲು ಬಿಡುತ್ತಿರಲಿಲ್ಲ.

ಕಂಗಳ ಮುಂದಣ ಕಾಮನ ಕೊಂದು
ಮನದ ಮುಂದಣ ಆಸೆಯ ತಿಂದು ಆತನನರಿ:

ಎಂದು ಹೇಳಿ ಕಳಿಸುತ್ತಿದ್ದನು.

ಹಣೆಯಲ್ಲಿ ಭಸ್ಮವಧರಿಸಿ ಕಿವಿಯಲ್ಲಿ ಕೆಂದಳಿರನಳವಡಿಸಿಕೊಂಡು ಕಾಗಿನ ಕಪ್ಪಡವುಟ್ಟು ಒಂದು ಕಾಲಲಿ ಗೆಜ್ಜೆಯನು ಬಿಗಿದು ಟಗರಿನ ಬಲಿದ ಕೊಂಬನ್ನು ಎಡದ ಕೈಯಲ್ಲಿ ಹಿಡಿದು ಕಲಕೇತವೇಷವನ್ನು ಧರಿಸಿ ಶಿವಭಕ್ತನಿವಾಸಗಳಲ್ಲಿಗೆ ಹೋಗಿ ತನ್ನ ಮೋಜಿಯನಂತ ಮುಟಿಕಸುತ ಆವರನ್ನು ನಗಿಸಿ ಕೋಡಗದಾಟವಾಡುವ ಭೃಂಗಿಯಂತೆ ನೃತ್ಯ ಮಾಡುತ್ತಿರುವ ಈತನಾರಿರಬಹುದು? ಆತನೇ ಕಲಕೇತಬ್ರಹ್ಮಯ್ಯ ಮನಸಂತೋಷಗೊಂಡ ಭಕ್ತರು ಕೊಟ್ಟುದರಲ್ಲಿ ದಾಸೋಹ ಮಾಡುತ್ತ ಜನರನ್ನು ತಿದ್ದಿದ ಶರಣನೀತ.

ಹೀಗೆ ನೃತ್ಯ ಜನರ ಮನಕ್ಕೆ ಅರಿವನ್ನು ಕೊಡುವ ಸಂಜೀವಿನಿಯಾಯಿತು.

ಬಾಳದೀವಿಗೆಯಾಯಿತು, ಚಿರಸ್ಥಾಯಿಯಾಯಿತು.

ನಾಟಕ :— ಸಾಹಿತ್ಯ, ಸಂಗೀತ್ಯ,ನೃತ್ಯ ಇವುಗಳ ತ್ರಿವೇಣಿ ಸಂಗಮವೇ ನಾಟಕ ಕಲೆ. ಶಕಣರು ನಾಟಕವೆಲ್ಲಿ ಪ್ರದರ್ಶಿಸಿದರು? ಎಂದು ಕೇಳುವ ಜನತೆಗೆ ಕಣ್ಮುಂದೆಯೇ ಇದೆ ಶೂನ್ಯಸಂಪಾದನೆ. ಒಂದೊಂದು ಸಂಪಾದನೆಯು ಒಂದೊಂದು ನಾಟಕ. ಮುಂಜಾವಿಂದ ಸಂಜೆವರೆಗೆ ತಾವು ಕಂಡುಂಡ ನಿತ್ಯ ಸತ್ಯವನ್ನು ಸಂಜೆ ಅನುಭವ ಮಂಟಪದಲ್ಲಿ ಚರ್ಚಿಸುತ್ತಿದ್ದರು. ಒಂದೊಂದು ಸುಂದರವಾದ ಭಕ್ತಿ ಪ್ರಧಾನವಾದ ನಾಟಕಗಳಿಗೆ ವಸ್ತುವಾಗುತ್ತದೆ. ಅಂತೆಯೇ ಒಬ್ಬೊಬ್ಬ ಶರಣರ ಅನುಭವವು ಏಕಪಾತ್ರಾಭಿನಯವಾಗುತ್ತದೆ ಘಟ್ಟಿವಾಳಯ್ಯನ ಆರ್ಭಟ, ಕಲಕೇತ ಬಹ್ಮಯ್ಯನ ಕೋಡಂಗಿಯಾಟ ಪ್ರಭುದೇವರ ಚರ್ಚೆ ಎಲ್ಲವನ್ನು ಕಣ್ಮುಂದೆ ತಂದು ಕೊಂಡಾಗ ಒಂದೊಂದು ಪ್ರಖ್ಯಾತ ನಾಟಕ ವಸ್ತುವಾಗಿದೆ.

ಧರ್ಮದ ವಿಶಾಲತತ್ತ್ವವನ್ನು ಜನಮನಮುಟ್ಟುವಂತೆ ಮಾಡಲು ಈ ಕಲಾ ಮಾಧ್ಯಮದಿಂದ ಸಾಧ್ಯವೇ ಹೊರತು ಬೇರೆಯುದರಿಂದಲ್ಲ. ಇದಕ್ಕಾಗಿ ಶರಣರು

ಪ್ರತ್ಯೇಖ ರಂಗಭೂಮಿಯನ್ನು ಕಟ್ಟಿರಲಿಲ್ಲ. ನಿಂತ ಸ್ಥಳವೇ ರಂಗಸ್ಥಳವಾತ್ತು. ಅವರೇ ಸ್ವಯಂ ಪಾತ್ರದಾರರಾಗಿದ್ದರು. ಪ್ರತಿಯೊಂದು ಮನೆಗೂ ಬೀದಿಗೂ ತತ್ತ್ವವನ್ನು ಸಾರಿದರು ಅದನ್ನು ಜೀವಂತಗೊಳಿಸಿದರು. ಇಂದು ಈ ಕಲೆಗಳೆಲ್ಲ ಕಣ್ಮರೆಯಾಗುತ್ತಿವೆ. ಜೊತೆಗೆ ಧರ್ಮದ ತತ್ತ್ವವು ನಶಿಸಿ ಹೋಗುತ್ತಿದೆ. ಇದಕ್ಕೆ ಕಾರಣ ಜನರಲ್ಲಿ ಸೂಕ್ತವಾದ ತಿಳುವಳಿಕೆ ಇಲ್ಲದಿರುವುದಾಗಿದೆ, ಇತ್ತೀಚಿನ ದಿನಗಲ್ಲಿ ಜಗದ್ಗುರುಗಳವರು ಈ ಮಾಧ್ಯಮಗಳ ಮೂಲಕ ತಿಳುವಳಿಕೆ ನೀಡುತ್ತ ತನ್ಮೂಲಕ ಜರನ್ನು ಪ್ರೋತ್ಸಾಹಿಸುತ್ತ ಇದ್ದಾರೆ. ನಶಿಸಿ ಹೋಗುತ್ತಿರುವ ಕಲೆಗೆ ಶಕ್ತಿ ತುಂಬುತ್ತಿದ್ದಾರೆ. ತನ್ಮೂಲಕ ಕಲೆಯ ಉಳಿವು ಮತ್ತ ಜನತೆಯ ಉಳಿವುಂಟಾಗಲು ಸಹಾಯಕವಾಗಿದೆ. ●

---

## ಖಡ್ಗ

ದೇವಜೀಯೆಂದುಘೇಯೆಂದು-ಕೈಯೆತ್ತಿ ಪುಷ್ಪಂಗಳಂ ಬೀರಿ, ಕೊಂಡಾಡ-ತಿರ್ಪಾಗಲಾ ದೇವರಲ್ಲಲ್ಲಿಗಂ ನಿಲ್ಲು ನಿಲ್ಲುತ್ತೈತರುತ್ತಿರಲ್ ಚೆಲ್ವ ಪೋರರ್ ''

ಭಲಾ ವೀರಾಧಿವೀರ' ಭದ್ರಕಾಳೀವರಾಧೀರ, ಗಂಭೀರ ಶೂರ ಭಲಾ ಎನುತ, ಔಡೊತ್ತುತ್ತುಂ, ಮೀಸೆಯ ತಿದ್ದಿ ತೀಡುತ್ತ ಖಡ್ಗಂಗಳಂ ಝುಳುಪಿಸುತ್ತುಂ—

ಫಡಾ ಕೇಳು ಪಯೋಧಿಯೊಳ್ ಮುನ್ನ ಹಾಲಾಹಲಂ ಪುಟ್ಟೆ, ಕೋಲಾಹಲಂ ಗೈವುತ್ತೈತರ್ಪ ತದ್ವಾರ್ತೆಯುಂ ಕೇಳುತ "ಆಹಾ ಮಹಾಮೋಸಮಾಯ್ತೆನ್ನುತುಂ, ಬೇಗ ಬಂದಾಗಲಾ ಕಾಳಕೂಟಪ್ರಭಾ ಪುಂಜದೌದ್ಧತ್ಯಮಂ ಶಾಂತಿಯುಂ ಗೈದು, ಹಸ್ತಾಬ್ಜದಿಂದೆತ್ತಿ ಜಂಬೂಫಲಪ್ರಾಯದಿಂದಂಗಳಸ್ಥಾನದೊಳ್ ತಾಳ್ದು. ಶೋಕಾರ್ತರಾದೆಲ್ಲ ದೇವರ್ಕಳಂ ಕಾಯ್ದು, ಲೋಕೇಶನಾರ್ಬಲ್ಲೆಯಾ ? ಮತ್ತು ಕೇಳಾಸುದ್ದಾಮ ಚರಿತ್ರೆಯುಂ. ಮುನ್ನಮೀ ಧಾತ್ರಿಯೇ ತೇರು, ಚಂದ್ರಾರ್ಕರೇ ಚಕ್ರಗಳು, ವೇದ ಸಂದೋಹಮುಶ್ವಂಗಳಂಭೋಜ ಸಂಭೂತನೇ ಸೂತನುದ್ದಂಡ ಕೋದಂಡನೇ ಮೇರು, ಭೋಗೀಂದ್ರನೇ ನಾರೀ, ತುಣೀರಮಂ ಭೋಧಿ-ಬಾಣಂ ರಮಾಲೋಲನಾಗಲ್, ಭಳೇ ಎಂದು ಬಂದಾ ರಥಾರೋಹಣಂ ಗೈದು ನೋಡುತ್ತಲಾಗಳ್ ನಭೋಮಾರ್ಗದೊಳ್, ದಾನವರ್ಕಟ್ಟಿಕೊಂಡಿರ್ದ ಬಲ್ ಚೋದ್ಯಮಾದಾಪುರಂಗಳ್ಗೆ ಮುನ್ನಾರಿಗುಂ ಕಾಣದಂತಾಮುಯುಂ ಕೂಡಿಸಿಟ್ಟಿರ್ದ ಕೀಳ್ಗಂಡು ಕೋದಂಡಮುಂ ಕೊಂಡು ಜ್ಯಾನಾದನುಂ ಮಾಡಿ ಚಂಡಾಸ್ತ್ರಮುಂ ಪೂಡಿ, ಬೊಬ್ಬಿಟ್ಟೈತ್ತಿ ಚಿಮುಕ್ತಲ್ಲಲ್ಲಲ್ಲಿಗಂ ದಿವ್ಯ ಖಡ್ಗಂಗಳಂ ಪೇಳುತಂ ತಮ್ಮ ಚಾತುರ್ಯ ಗಂಭೀರ ಶೂರತ್ವಮುಂ ತೋರುತ್ತೈತರುತಿರ್ಪ ಸತ್ಕೀರ್ತಿಯುಂ ಮೂರ್ತಿಯಿಂ......

[ಮತಕೂರು ಶ್ರೀನಂಜುಂಡಶಿವಯೋಗೀ ವಿರಚಿತ 'ಅಟವೀಶ ಚರಿತ್ರೆ'ಯಿಂದುದ್ಧರಿಸಿದೆ]

ಆಧುನಿಕ ಕುಲಪತಿ



ಮುಂದುವರಿದ ಲೇಖನ

# ಪಿಡುಪರ್ತಿಯ ವೀರಶೈವಾಂಧ್ರ ಕವಿಗಳು

—ಸಿ. ಟಿ. ಎಂ. ಕೊಟ್ರಯ್ಯ

೧ **ಪಿಡುಪರ್ತಿ ಬಸವನ್ನ:** ಈಗಾಗಲೇ ತಿಳಿಸಿರುವ ಪ್ರಕಾರ, ಪಿಡುಪರ್ತಿ ಕವಿಗಳಲ್ಲಿ ಮೂವರು ಮುಖ್ಯರು. ಮೊದಲನೆಯವನೇ ಪಿಡುಪರ್ತಿಯ ಬಸವನ. ಈತನಿಗೆ ಪಿಡುಪರ್ತಿ ಬಸವೇಶ್ವರ ಮತ್ತು ಪಿಡುಪರ್ತಿ ಬಸವನಾಹ್ವಾಯುಡು ಎಂಬ ಹೆಸರುಗಳಿದ್ದುದಾಗಿಯೂ ತಿಳಿಯುತ್ತದೆ. ಮೇಲೆಯೇ ತಿಳಿಸಿರುವಂತೆ ಈತನ ಕಾಲ ಕ್ರಿ. ಶ. ೧೫ ನೇ ಶತಮಾನದ ಉತ್ತರಾರ್ಧ.

ಪಿಡುಪರ್ತಿಯ ಬಸವನು ಮೂರು ಗ್ರಂಥಗಳನ್ನು ತೆಲುಗು ಭಾಷೆಯಲ್ಲಿ ರಚಿಸಿರುತ್ತಾನೆ. ಅ) ಪಿಲ್ಲ ನಯನಾರು ಕಥೆ. ಇದು ತಮಿಳುನಾಡಿನ ಮಹಾಶಿವ ಭಕ್ತನೊಬ್ಬನನ್ನು ಕುರಿತಾದ ಕಥೆ. ತಮಿಳು ನಾಡಿನಲ್ಲಿ ಈತನು ತಿರುಜ್ಞಾನಿ ಸಂಬಂಧಿ ಎಂದೂ ಹೆಸರಾಗಿದ್ದಾನೆ. ಈತನು ಕುಲತುಂಗ ಚೋಳ, ಸುಂದರ ಪಾಂಡ್ಯ ಮುಂತಾದ ಅರಸನ್ನು ಶೈವಮತಕ್ಕೆ ಪರಿವರ್ತಿಸಿದ ಜ್ಞಾನಿ ಹಾಗೂ ಮಹಾನ್ ಭಕ್ತ. ಇದೇ ಕಥೆಯು ಪಾಲ್ಕುರಿಕೆ ಸೋಮನಾಥನ ಬಸವ ಪುರಾಣದ ಒಂದು ಅಧ್ಯಾಯದಲ್ಲಿ ವರ್ಣಿತವಾಗಿದೆ. ಇದನ್ನೇ ಆಧರಿಸಿ ಒಂದು ಪ್ರತ್ಯೇಕ ಗ್ರಂಥವನ್ನು ಪಿಡುಪರ್ತಿ ಬಸವನ ರಚಿಸಿದನು. ಈ ವಿಷಯವು ಆತನ ಇನ್ನೊಂದು ಕೃತಿಯಾದ ದೀಕ್ಷಾಭೋಧದಿಂದ ತಿಳಿದುಬರುತ್ತದೆ. ಆ) ಬ್ರಹ್ಮೋತ್ತರ ಖಂಡ. ಇದು ಸ್ಕಾಂದ ಪುರಾಣದ ಒಂದು ಖಂಡದ ವಿಷಯುವನ್ನಾಧರಿಸಿ ರಚಿಸಲ್ಪಟ್ಟುದಾಗಿದೆ. ಇ) ವೀರಶೈವ ದೀಕ್ಷಾಬೋಧಮು ಇದು ಕನ್ನಡದ ಹರಿಹರ ಕವಿಯ ಸಮಕಾಲೀನನೂ, ಕರ್ನಾಟಕದ ಹೊಯಿಸಳ ಅರಸರ ಆಸ್ಥಾನದಲ್ಲಿ ಮಂತ್ರಿಯೂ ಆಗಿದ್ದ ಕೆರೆಯ ಪದ್ಮರಸನು ಬರೆದ ದೀಕ್ಷಾಬೋಧೆ ಎಂಬ ಕಾವ್ಯದ ತೆಲುಗು ರೂಪವಾಗಿದೆ. ಈ ಕೃತಿಯು ರಗಳೆಯ ರೂಪದಲ್ಲಿದ್ದರೆ, ಪಿಡುಪರ್ತಿ ಬಸವನ ಕೃತಿಯು ದ್ವಿಪದಿಯಲ್ಲಿ ಮೂರು ಗುರುಶಿಷ್ಯ ಸಂವಾದ ರೂಪದಂತಿದೆ. ಇದರಲ್ಲಿ ವೀರಶೈವ ಮತತತ್ವ, ಗುರುಶಿಷ್ಯ ಲಕ್ಷಣಗಳು, ದೀಕ್ಷಾವಿಧಾನ, ವೀರಶೈವ ಮತ ಸಂಪ್ರದಾಯಗಳು ಮುಂತಾದ ವಿವರಗಳನ್ನು ತಿಳಿಸಲಾಗಿದೆ. ಈ ಕಾವ್ಯವನ್ನು ಸೂರ್ಯವಂಶದ, ಕ್ಷತ್ರಿಯ ಕುಲದ, ಭಾರದ್ವಜ ಗೋತ್ರದ ತಿಮ್ಮಭೂವರನ ಪುತ್ರನಾದ ಹಾಗೂ ವೀರಶೈವಾಚಾರ ದುರಂಧರನಾದ ವೀರಭಪಾಲನೆಂಬ ಅಭಿಮಾನಿ

ಅರಸನ ಪ್ರಾರ್ಥನೆಯಂತೆ ರಚಿಸಲ್ಪಟ್ಟಿತು. ಆತನಿಗೇ ಅರ್ಪಿಸಿದಂತೆಯೂ ಹೇಳಿಕೊಂಡಿರುತ್ತಾನೆ.

(ಆದರೆ ಈ ವೀರ ಭೂಪಾಲನಾರೆಂಬುದು ತಿಳಿದು ಬಂದಿಲ್ಲ]. ಆ ಕಾಲದ ವೀರಶೈವಮತ, ಸ್ವರೂಪವನ್ನು ತಿಳಿಸುವಲ್ಲಿ ಇದು ಒಂದು ಮುಖ್ಯ ಗ್ರಂಥವಾಗಿದೆ.

ಈತನು ಈ ಕೃತಿಯ ಆರಂಭದಲ್ಲಿ ಪಾಲ್ಕುರಿಕೆ ಸೋಮನಾಥನನ್ನ ಸ್ತುತಿಸುತ್ತಾ ಆರಂಭಿಸುತ್ತಾನೆ. ಆ ನಂತರ, ಚಿಕ್ಕ ಪ್ರಾಯದಲ್ಲಿ ಶಿವ ಕಥೆಗಳನ್ನು ಹೇಳುತ್ತಾ ತೆಲುಗು ಭಾಷೆಯಲ್ಲಿ ಬರೆದುದಾಗಿಯೂ, ನಡುವಯಸ್ಸಿನಲ್ಲಿ ಪಿಲ್ಲನಯನಾರು ಚರಿತ್ರೆಯನ್ನು ರಚಿಸುದುದಾಗಿಯೂ ಹೇಳುತ್ತಾ, ಪ್ರಸಕ್ತ ಕನ್ನಡದ ಕೇಯ ಪದ್ಮರಸನ ದೀಕ್ಷಾಬೋಧೆ ಗ್ರಂಥವನ್ನು ತೆಲುಗಿನಲ್ಲಿ ದ್ವಿಪದಿಯಲ್ಲಿ ರಚಿಸಿರುವುದಾಗಿ ಹೇಳಿಕೊಂಡಿರುತ್ತಾನೆ. ಈ ಕಾವ್ಯದ ಕೊನೆಯಲ್ಲಿ "ಇದು ಪಾಲ್ಕುರಿಕೆ ಸೋಮೇಶ್ವರಾರಾಧ್ಯ ಸದಮಲ ಶಿಷ್ಯ, ಶಿಷ್ಯ ಪ್ರಶಿಷ್ಯ........... ಪಿಡುಪರ್ತಿ ಬಸವೇಶ್ವರುಡು (ಬಸವಾಹ್ವಾನಾಯುಡು) ರಚಿಸಿದ ಶೈವ ಪುರಾಣ ತಂತ್ರಮು... ........ವೀರಶೈವ ದೀಕ್ಷಾಬೋಧೆ" ಎಂದು ಹೇಳಿ ಮುಗಿಸಿರುತ್ತಾನೆ.

೨ **ಪಿಡುಪರ್ತಿ ಸೋಮನಾಥ :** ತನ್ನ ಪದ್ಯ ಬಸವ ಪುರಾಣದಲ್ಲಿ ತಿಳಿಸಿರುವಂತೆ, ಬಸವನ ಮತ್ತು ನಾಗವಾಂಬಾ ದಂಪತಿಗಳಿಗೆ ಈತನು ಜೇಷ್ಠ ಪುತ್ರನಾಗಿ ಜನಿಸಿದನು. ಈತನು ಕ್ರಿ. ಶ. ೧೬ನೇ ಶತಮಾನದ ಪೂರ್ವಾರ್ಧದಲ್ಲಿದ್ದನು. ಈತನು ಮುಖ್ಯವಾದ ಎರಡು ಕೃತಿಗಳಿಗೆ ಕರ್ತೃವಾದನು. (ಅ) ಪದ್ಯ ಬಸವಪುರಾಣ ತಮ್ಮ ಕುಲಗುರುವಾದ ಪಾಲ್ಕುರಿಕೆ ಗುರುವನ್ನು(ಸೋಮನಾಥ)ನನ್ನು ಸ್ತುತಿಸಿ ತನ್ನ ಪದ್ಯ ಬಸವ ಪುರಾಣವನ್ನು ಆರಂಭಿಸಿರುತ್ತಾನೆ. ತನ್ನ ತಂದೆಯಾದ ಬಸವನಾರ್ಯನ ಆಣತಿಯ ಪ್ರಕಾರ ಪಾಲ್ಕುರಿಕೆ ಸೋಮನಾಥನು ರಚಿಸಿದ್ದ ದ್ವಿಪದಿ ಬಸವ ಪುರಾಣವನ್ನೇ ಪದ್ಯರೂಪದಲ್ಲಿ ರಚಿಸಿರುವುದಾಗಿ ಹೇಳಿಕೊಂಡಿರುತ್ತಾನೆ. ಬರೆಯಲಾಗಿದೆ. ಅಲ್ಲದೆ, ಪಾಲ್ಕುರಿಕೆ ಸೋಮನಾಥನು ಬರೆದಿರುವ ಚಂಪೂವಿನಲ್ಲಿ ಚರಿತ್ರೆಯನ್ನೇ ಶ್ರೀನಾಥ ಕವಿಯು, ಮತ್ತು ಪಾಲ್ಕುರಿಕೆ ಸೋಮನಾಥನ ಪಂಡಿತಾರಾಧ್ಯ ಪುರಾಣವನ್ನೇ ಭೀಮಕವಿಯು ಪುನಃ ರಚಿಸಿರುವಂತೆ, ಪಿಡುಪರ್ತಿ ಸೋಮನಾಥನು ಬಸವ ಪದ್ಯ ಬಸವ ಪುರಾಣವನ್ನು ರಚಿಸುವಲ್ಲಿ ಕೃತಿಚೌರ್ಯವನ್ನೆಸಗಿದಂತಾಗದೆಂದು ತನ್ನ ತಂದೆಯು ತಿಳಿಸಿರುವುದಾಗಿ, ಸಮರ್ಥಿಸಿ ಕೊಂಡಿರುತ್ತಾನೆ. ಆದರೂ ಈ ಎರಡೂ ಕಾವ್ಯಗಳ ಪದ ಜೋಡಣೆಯಲ್ಲಿ ಬಹುಪಾದ ಅನ್ಯೋನತೆ ಮತ್ತು ಅನುಕರಣೆಗಳು ಕಾಣಬರುತ್ತವೆ. ಮತ್ತೆ ಕೆಲವೆಡೆಗಳಲ್ಲಿ ಮೂಲ ಕೃತಿಗಿಂತಲೂ ಹೆಚ್ಚು ರಸವತ್ತಾಗಿ ಹಾಗೂ ಹೃದಯಂಗಮವಾಗಿ ರಚಿಸಲ್ಪಟ್ಟಿದೆ. ಈತನ ಪದ್ಯಗಳಲ್ಲಿ ಭಕ್ತಿಯ ಉದ್ರೇಶವನ್ನು ಮಿಗಿಲಾಗಿ ವ್ಯಕ್ತಪಡಿಸಲಾಗಿದೆ. ಈ ಕಾವ್ಯಗಳ ಪ್ರಭಾವವನ್ನು ದೂರ್ಜಟಿಯ ಕಾಳಹಸ್ತಿ ಮಹಾತ್ಮ್ಯೆಯಲ್ಲೂ ಕಾಣಬಹುದು.



(ಆ) **ಪ್ರಭು ಲಿಂಗ ಲೀಲೆ :** ಇದು ಪಿಡುಪರ್ತಿ ಸೋಮನಾಥನ ಇನ್ನೊಂದು ಉತ್ತಮ ಕೃತಿಯೆಂದು ತಿಳಿಯಬಹುದು. ಕನ್ನಡ ಭಾಷೆಯಲ್ಲಿ ಚಾಮರಸನಿಂದ ರಚಿಸಲ್ಪಟ್ಟಿರುವ ಪ್ರಭುಲಿಂಗಲೀಲೆಯೇ ಈ ತೆಲುಗು ಕೃತಿಗೂ ಸ್ಫೂರ್ತಿ. ಮೂಲ ಕೃತಿಯಲ್ಲಿರುವ ಪ್ರಕಾರ, ನಿರ್ವಿಕಾರ ಗುಣಮೂರ್ತಿಯಾದ ಅಲ್ಲಮ ಪ್ರಭುವಿನ ಚರಿತ್ರೆ ಮತ್ತು ಲೀಲೆಗಳ ಜೊತೆಗೆ ಇತರ ಶಿವಭಕ್ತರ ಕಥೆಗಳನ್ನು ಹೆಣೆದುಕೊಂಡಿದೆ, ಈ ಗ್ರಂಥ. ಚಾಮರಸನು ಕನ್ನಡದಲ್ಲಿ ಬರೆದ ಪ್ರಭುಲಿಂಗಲೀಲೆಯನ್ನೇ ತೆಲುಗು ಭಾಷೆಯಲ್ಲಿ ಹೇಳಿರುವುದಾಗಿ ತಿಳಿಸಿರುತ್ತಾನೆ ಮತ್ತು ಈ ಗ್ರಂಥವನ್ನು ಕಾಂಚಿ ನಗರದ (ಕಾಂಚೀಪುರ) ವೈಶ್ಯ ಶಿಖಾಮಣಿ ನೆಲ್ಲೂರಿನ ರಾಮುಲಿಂಗಯ್ಯನ ಪ್ರೇರಣೆಯ ಮೇರೆಗೆ ರಚಿಸಿದ್ದಾಗಿ ಹೇಳಿರುತ್ತಾನೆ. ಇದು ದ್ವಿಪದಿಯಲ್ಲಿ ಬರೆಯಲ್ಪಟ್ಟ ಒಂದು ಉತ್ತಮ ತೆಲುಗು ಭಾಷೆಯ ಕಾವ್ಯವಾಗಿದೆ.

೩. **ಪಿಡುಪರ್ತಿ ಬಸವಪ್ಪ :** ಈತನು ಪಿಡುಪರ್ತಿ ಸೋಮನಾಥನ ಚಿಕ್ಕ ಸಹೋದರರಲ್ಲೊಬ್ಬನಾದ ಪಾಲನಾರ್ಯ (ಬಾಲನಾರ್ಯ)ನ ಮಗ. ಈತನು ಸಹ ಕ್ರಿ. ಶ. ೧೬ನೇ ಶತಮಾನದ ಪೂರ್ವಾರ್ಧದಲ್ಲಿ ಜೀವಿಸಿದ್ದುದಾಗಿ ತರ್ಕಿಸಲಾಗಿದೆ.

ಈತನು ತನ್ನ ದೊಡ್ಡಪ್ಪನಾದ ಪಿಡುಪರ್ತಿ ಸೋಮನಾಥನು ದ್ವಿಪದಿಯಲ್ಲಿ ರಚಿಸಿದ ಪ್ರಭುಲಿಂಗಲೀಲೆ ಕಾವ್ಯವನ್ನೇ ಪದ್ಯ ಪ್ರಬಂಧ ರೂಪದಲ್ಲಿ ಬರೆದನು. ಯಥಾಪ್ರಕಾರ, ತನ್ನ ಪೂರ್ವಜರನ್ನೇ ಅನುಸರಿಸುತ್ತಾ, ತನ್ನ ಗ್ರಂಥಾರಂಭದಲ್ಲಿ ಪಾಲ್ಕುರಿಕೆ ಸೋಮನಾಥನನ್ನು ಸ್ತುತಿಸಿ ನಂತರ ಇತರ ಶಿವಭಕ್ತರನ್ನು ಸ್ತುತಿಸುತ್ತಾ ಮುಂದುವರಿಯುತ್ತಾನೆ. ತನ್ನ ಗ್ರಂಥವನ್ನು, ಭೃಂಗಿರಿಟ ಗೋತ್ರದವನೂ, ನಾಗನಾಥನ ವಂಶಜನೂ, ವೀರಮಾಂಬಾಳ ಸುಪುತ್ರನೂ, ಮತ್ತು ಚಲ್ಲಪಲ್ಲಿ ಶಾಸನದಲ್ಲಿ ಉಲ್ಲೇಖಿಸಲ್ಪಟ್ಟವನೂ ಆದ ಚಲ್ಲಪಲ್ಲಿ ಮಲ್ಲನಾರಾಧ್ಯನಿಗೆ ಅಂಕಿತ ಮಾಡಿರುವುದಾಗಿ ಹೇಳಿಕೊಂಡಿರುತ್ತಾನೆ. ತನ್ನ ಗ್ರಂಥದ ಕೊನೆಯಲ್ಲಿ 'ಇದಿ ಪಾಲ್ಕುರಿಕಿ ಸೋಮೇಶ್ವರ ವರ ಪ್ರಸಾದಲಬ್ಧ ಕವಿತಾಚಾತುರ್ಯಧುರ್ಯ, ಪಿಡುಪರ್ತಿ ಪಾಲನಾರ್ಯ ಸತ್ಪುತ್ರ, ಕುಲ ಪವಿತ್ರ ಬಸವಪ್ಪ ನಾಮಧೇಯ ಪ್ರಣೀತಂಬೆನ ಪ್ರಭುಲಿಂಗಲೀಲೆ ...........ಎಂದು ಹೇಳಿಕೊಂಡಿರುತ್ತಾನೆ.

ಹೀಗೆ ಪಿಡುಪರ್ತಿಯ ಕವಿಗಳು ಆಂಧ್ರದಲ್ಲಿ ವೀರಶೈವ ಧರ್ಮ, ಸಾಹಿತ್ಯ ಸಂಸ್ಕೃತಿಗಳ ಸಂವರ್ಧನೆಗೆ ಗಣನೀಯ ಸೇವೆ ಸಲ್ಲಿಸಿದರು. ಈಗಾಗಲೇ ವಿವರಿಸಿರು

ವಂತೆ, ಇವರೆಲ್ಲರೂ ಪಾಲ್ಕುರಿಕೆ ಸೋಮನಾಥನನ್ನೇ ಎಲ್ಲಾ ವಿಧಗಳಲ್ಲಿ ಅನುಸರಿಸುತ್ತಾ, ಆತನನ್ನು ಗುರುವಾಗಿ ಭಾವಿಸುತ್ತಾ, ಆತನ ಮೇಲೆ ಅಪಾರ ಗೌರವ, ಭಕ್ತಿಯುಳ್ಳವರಾಗಿದ್ದುಕೊಂಡು, ತಮ್ಮ ಗ್ರಂಥಗಳನ್ನು ರಚಿಸಿದರು. ಅಲ್ಲದೇ ತಾವೂ ಸಹ ಗುರುಮಠಾಧಿಪತ್ಯವನ್ನು ವಹಿಸಿಕೊಂಡು, ವೀರಶೈವ ಧರ್ಮ ಪ್ರಚಾರದಲ್ಲಿ ಸಕ್ರಿಯಪಾತ್ರವನ್ನು ನಿರ್ವಹಿಸಿದರು.

### ಆಧಾರ ಗ್ರಂಥಗಳು


೧. ರಾಮಕೃಷ್ಣಶಾಸ್ತ್ರಿ. R : ವೀರಶೈವಾಂಧ್ರ ವಾಙ್ಮಯಮು ತಿರುಪತಿ(೧೯೫೨)

೨. ನರಸಿಂಹಾಚಾರ್ಯ. R: ಕರ್ಣಾಟಕ ಕವಿಚರಿತೆ. Vol. I. ಬೆಂಗಳೂರು (೧೯೭೨ – ಪರಿಶೋಧಿತ)

೩. ವೀರಶೈವ ಸಾಹಿತ್ಯ ಸಮೀಕ್ಷೆ.[ಸಂ]. ಲಕ್ಷ್ಮೇಶ್ವರ [೧೯೬೯]

೪. ತೆಲುಗು ವಿಜ್ಞಾನ ಸರ್ವಸ್ವಮು [ಸಂ] Vol. III, ಮದ್ರಾಸು (೧೯೬೯)

೫. ಮಹಾಂತಯ್ಯ. M. S : ಆಂಧ್ರದಲ್ಲಿ ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿಗಳ ವಿಕಾಸ, ಬಸವ ಜರ್ನಲ್, Vol ii part 4, ಬೆಂಗಳೂರು [೧೯೭೮]


---

### "ವೇದಾಂತ ಕವನ"

"That this episode of the mahabharata is the most beautiful-ray, perhaps the only true philosophical poem, which we can find in all the literatures known to us."

[ಮಹಾಭಾರತದ ಈ ಉಪಾಖ್ಯಾನ, ಅತ್ಯಂತ ಸುಂದರ. ಅಷ್ಟೇ ಅಲ್ಲ ನಮಗೆ ತಿಳಿದಿರುವ ಜಗತ್ತಿನ ಎಲ್ಲಾ ಸಾಹಿತ್ಯಗಳಲ್ಲಿಯೂ, ಇದೊಂದೇ ನಿಜವಾದ ವೇದಾಂತ ಕವನ." -ಭಗವದ್ಗೀತೆಯ ಬಗ್ಗೆ ಜರ್ಮನ್ ವಿಲ್‌ಹೆಲ್ಮ್‌ವಾನ್ ಹಂಬೋಲ್ಟ್ ಎಂಬ ದಾರ್ಶನಿಕನ ಹೇಳಿಕೆ.]

(ಅಮೇರಿಕದಲ್ಲಿ ಗೊರೂರು ಗ್ರಂಥದಿಂದ ಸಂಗ್ರಹ.)





# ಗ್ರಾಮಾಂತರ ಬಸವ ಜಯಂತಿ


—ಹೆಚ್. ವಿ. ವೀರಭದ್ರಯ್ಯ ಎಂ. ಎ.


## ಗೌರಿಬಿದನೂರು ತಾಲ್ಲೂಕು ತರಿದಾಳು ಗ್ರಾಮದಲ್ಲಿ ಶ್ರೀ ಶ್ರೀಗಳವರ ಆಶೀರ್ವಚನ

ಸ್ವಾತಂತ್ರ್ಯ ಪಡೆದು ಮೂವತ್ತೆರಡು ವರ್ಷಗಳಾದುವು. ದೇಶದ ಅಭಿವೃದ್ಧಿಯಲ್ಲಿ ಸರಕಾರ, ಸಮಾಜ ಚಿಂತನ ಮಂಥನ ಮಾಡುತ್ತಿದ್ದಾರೆ. ಕೋಟಿ ಕೋಟಿ ಹಣ ಖರ್ಚಾಗುತ್ತಿದೆ. ಗಾಂಧಿಯವರ ಆದೇಶ ಭಾರತೀಯ ವ್ಯಕ್ತಿಗೆ ಎರಡು ಒತ್ತಿನ ಊಟ ಸಿಕ್ಕುವ ವ್ಯವಸ್ಥೆಯಾಗಬೇಕು. ಆಗಲೇ ಸ್ವಾತಂತ್ರ್ಯಕ್ಕೆ ಅರ್ಥ. ಸರ್ಕಾರ ಹಲವು ಯೋಜನೆಗಳನ್ನು ಮಾಡುತ್ತಿದೆ. ಯೋಜನೆಗಳು ಸಮರ್ಪಕವಾಗಿ ಕಾರ್ಯ ನಿರ್ವಹಿಸಲು ನಮ್ಮಲ್ಲಿನ ಬಡತನ ಮತ್ತು ಅನೇಕ ಸಮಸ್ಯೆಗಳು ಅಡ್ಡ ಬರುತ್ತಿವೆ. ಜನಸಂಖ್ಯೆ ಬಹಳವಾಗಿದೆ ಎನ್ನುವ ಕೂಗು ಒಂದುಕಡೆಯಾದರೆ ಕಾಲ ಕಾಲಕ್ಕೆ ಮಳೆ ಬಾರದೇ ಇರುವ ಸಮಸ್ಯೆ ಮತ್ತೊಂದೆಡೆಯಾಗಿದೆ. ಹೀಗಾಗಿ ಬಡತನ ಅತ್ಯಂತ ಭೀಕರವಾಗುತ್ತಿದೆ. ಇವತ್ತಿನ ಸರಕಾರದ ಯೋಜನೆಯನ್ವಯ ನಾವು ಶ್ರದ್ಧೆಯಿಂದ ನಿಷ್ಠೆಯಿಂದ ಯೋಜನೆಯ ಅನುಷ್ಠಾನ ಮಾಡಿದರೆ ಬಡತನದ ಬವಣೆಯನ್ನು ತಪ್ಪಿಸಲು ಇನ್ನೂ ಸುಮಾರು ಐವತ್ತು ವರ್ಷಗಳು ಬೇಕಾದೀತು. ಹಾಗಾದರೆ ನಮ್ಮ ಬಡತನವನ್ನು ಹೋಗಲಾಡಿಸಿಕೊಳ್ಳಲು ನಾವು ಇನ್ನೂ ಐವತ್ತು ವರ್ಷಗಳು ಕಾಯಬೇಕೇ ? ಅದಕ್ಕೆ ಬೇರೆ ಮಾರ್ಗವೇ ಇಲ್ಲವೇ ? ಎಂದು ವಿಚಾರ ಮಾಡಿದ್ದೇ ಆದರೆ ಮಾರ್ಗ ಉಂಟು. ಕೇವಲ ಐದು ಹತ್ತು ವರ್ಷಗಳಲ್ಲಿ ನಾವು ನಮ್ಮ ಬಡತನವನ್ನು ನೀಗಿಕೊಂಡು ಸಮೃದ್ಧಿಯ ಜೀವನವನ್ನು ನಡೆಸುವ ಮಾರ್ಗವೆಂದರೆ ಭಗವಾನ್ ಬಸವಣ್ಣನವರ ಜೀವನ ಮತ್ತು ತತ್ತ್ವೋಪದೇಶದ ಪರಿಚಯ ಮಾಡಿಕೊಂಡು ಆಚರಿಸಿದರೆ ಸಾಧ್ಯ. ನಾಡಿನ ಉದ್ದಗಲ ಬಸವಜಯಂತಿ ಉತ್ಸವವನ್ನು ಬಹಳ ಉತ್ಸುಕತೆ ಮತ್ತು ವೈಭವದಿಂದ ಆಚರಿಸುತ್ತಾ ನಾವುಗಳು ಬಂದಿದ್ದೇವೆ. ಜಯಂತಿಯ ಉದ್ದೇಶ ಬರೀ ಆಚರಣೆಯಲ್ಲ. ನಾಲ್ಕು ಮಾತನ್ನು ಕೇಳುವುದಷ್ಟೇ ಅಲ್ಲ. ನಮ್ಮ ಬದುಕನ್ನು ಪರಿವರ್ತಿಸಿಕೊಳ್ಳುವುದಕ್ಕಾಗಿ. ಆದರ್ಶಬದುಕನ್ನು ರೂಪಿಸಿಕೊಳ್ಳುದಕ್ಕಾಗಿ.

ಜಗತ್ತಿನ ಉದ್ಧಾರಕ್ಕೆಂದೇ ಅನೇಕ ಜನ ಧರ್ಮಾಧಿಪಕರು ಅವತರಿಸಿದ್ದಾರೆ. ಏಸು ನಾನು ದೇವಧೂತ ದೇವರಿಂದ ಕಳುಹಿಸಲ್ಪಟ್ಟವನು ಎಂದ. ಪೈಗಂಬರ್ ನಾನು

ದೇವರ ಸೇವಕ ಎಂದು ಉಪದೇಶ ಮಾಡಿದ. ಈ ಅವತಾರಿಗಳು ಎಲ್ಲ ಮಾನವರಿಗಿಂತ ನಾವು ಮೇಲ್ವರ್ಗದವರು, ದೇವರಿಂದ ಕಳುಹಿಸಲ್ಪಟ್ಟವರು ಎಂಬ ಭಾವನೆ ಅವರಿಗಿತ್ತು. ಆದರೆ ಬಸವಣ್ಣ ಹಾಗೆನ್ನಲಿಲ್ಲ. ಬಸವಣ್ಣನವರು ತನ್ನದೇ ಆದ ಮಾರ್ಗದಲ್ಲಿ ನಡೆದಿದ್ದಾರೆ. ಅವರು ನಮ್ಮ ಹಾಗೆಯೇ ಹುಟ್ಟಿ ನಮ್ಮ ಮಧ್ಯದಲ್ಲಿಯೇ ಬೆಳೆದು ನಮ್ಮನ್ನು ಮೇಲೆತ್ತಲು ಎತ್ತರವಾಗಿ ಬೆಳೆದು ನಿಂತರು. ಬಸವಣ್ಣನವರು ಕೇವಲ ಒಂದು ಸಮಾಜದವರಲ್ಲ. ಎಲ್ಲ ಸಮಾಜದವರು, ಎಲ್ಲವರು. ಮತ್ತು ಎಲ್ಲರಿಗೂ ಬೇಕಾದವರು. ಇಂದು ಎಲ್ಲೆಡೆಯಲ್ಲಿ ವ್ಯಾಪಿಸಿರುವ ಏರುಪೇರುಗಳ ನಿವಾರಣೆಯಾಗಬೇಕು. ಇಂದಿನ ಅನಿಷ್ಟ ವಾತಾವರಣ ನಿವಾರಣೆಯಾಗಬೇಕು. ಇಂದಿನ ಅನಿಷ್ಟ ವಾತಾವರಣ ನಿವಾರಣೆಯಾಗಬೇಕಾದರೆ ಬಸವಣ್ಣನವರನ್ನು ಅಧ್ಯಯನ ಮಾಡಬೇಕು. ಮತ್ತು ಪ್ರತಿ ಮಾನವ ತನ್ನ ತನವನ್ನು ಅರ್ಥಮಾಡಿಕೊಳ್ಳಬೇಕು. ಮೊದಲು ಚರಾಚರ ಪ್ರಪಂಚವನ್ನು ಸೃಷ್ಟಿ ಮಾಡುವಾಗ ಭಗವಂತನಿಗೆ ಸಮಾಧಾನವಾಗಿರಲಿಲ್ಲ. ಮಾನವನ ಸೃಷ್ಟಿಮಾದ ಮೇಲೆ ಅವನಿಗೆ ಸಮಾದಾನವಾಯಿತು. ಜಗತ್ತು ಮಾನವನಿಗಾಗಿ. ಆದರೆ ಮಾನವ ಪರಮಾತ್ಮನ ಅನುಗ್ರಹದಿಂದ ಬಂದ ಮಾನವ ಜನ್ಮ ಮತ್ತು ಅವನ ಉಪಯೋಗಕ್ಕಾಗಿ ಸೃಷ್ಟಿಗೊಂಡ ಜಗತ್ತನ್ನು ಆತ್ಮಕಲ್ಯಾಣ ಮತ್ತು ಮಾನವ ಕಲ್ಯಾಣಕ್ಕಾಗಿ ವಿನಿಯೋಗಿಸಬೇಕು. ಅದರ ನೇರ ಉಪಯೋಗ ಮಾಡಿಕೊಳ್ಳಲಾಗದ ಅವಿವೇಕ ಮತ್ತು ಅಪರಾಧ ನಮ್ಮದು. ಮನುಷ್ಯ ಎಂದರೆ ಕಣ್ಣಿಗೆ ಕಾಣುವ ಬರೀ ದೇಹವಲ್ಲ. ಆತ್ಮ ಚೈತನ್ಯಯುಕ್ತವಾದ ದೇಹವೇ ಮನುಷ್ಯ. ಬರೀ ದೇಹ ಜಡವಾದದ್ದು. ಆತ್ಮ ಚೈತನ್ಯವುಳ್ಳದ್ದು. ಅವೆರಡನ್ನು ಜಡ, ಜಂಗಮವೆಂದು ವ್ಯವಹರಿಸುತ್ತೇವೆ. ದೇಹ, ಜಡ ಅಥವಾ ಸ್ಥಾವರ, ಆತ್ಮ ಜಂಗಮ. ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ. ಎಂಬ ಭಾವನೆ ಬಲಗೊಳ್ಳಬೇಕು.

ಧರ್ಮ ಎನ್ನುವುದು ಕೇವಲ ಸನ್ಯಾಸಿಗಳಿಗಷ್ಟೇ ಅಲ್ಲ. ಅದು ಎಲ್ಲ ಸಂಸಾರಿಗಳೂ ಅರಿತು ಆಚರಿಸಿ ಆತ್ಮಸಾಕ್ಷಾತ್ಕಾರ ಮಾಡಿಕೊಳ್ಳುವ ಮಾರ್ಗ ಉಂಟು ಎಂದು ಬಸವಣ್ಣನವರು ಬೋಧಿಸಿ ತೋರಿಸಿಕೊಟ್ಟರು. ಪ್ರಪಂಚದ ಮಧ್ಯೆ ಇದ್ದುಕೊಂಡು ಆತ್ಮೋದ್ಧಾರದ ಮಾರ್ಗವನ್ನು ತೋರಿಸಿಕೊಟ್ಟರು ಬಸವಣ್ಣನವರು. ಸಂಸಾರಿಯೇ ಆಗಲೀ, ಸನ್ಯಾಸಿಯೇ ಆಗಲೀ ಉತ್ತಮ ಸಂಸ್ಕಾರವಿರಬೇಕು. ಉತ್ತಮ ಸಂಸ್ಕಾರವನ್ನು ಮೈಗೂಡಿಸಿಕೊಳ್ಳಬೇಕು. ಉತ್ತಮ ಸಂಸ್ಕಾರಗೊಂಡ ಹೆಣ್ಣುಮಕ್ಕಳಿರುವ ರಾಷ್ಟ್ರ ನಿಜವಾದ ಧರ್ಮಭೂಮಿ. ಆದ್ದರಿಂದ ಪ್ರತಿಯೊಬ್ಬ ಮಾನವನಿಗೂ ದೇಹಜ್ಞಾನ, ಆತ್ಮಜ್ಞಾನ ಎರಡೂ ಬೇಕು.

ಇಂದು ಯಂತ್ರ ಜಗತ್ತು. ಹಲವಾರು ಯಂತ್ರಗಳು ಬಂದು ನಮ್ಮ ಜೀವನವನ್ನು ಸುಖಮಯವಾಗಿ ಮಾಡಿವೆ. ನಾವೇ ಉತ್ತಮವಾದ ನಾಗರೀಕರು.



ನಮ್ಮದು ಒಳ್ಳೆಯ ಜೀವನ. ನಮ್ಮ ಹಿಂದಿನವರು ಇಂದಿನ ಯಂತ್ರ ಸೌಕರ್ಯವನ್ನು ಪಡೆಯದೆ ಅನಾಗರಿಕರಂತೆ ಜೀವನವನ್ನು ನಡೆಸುತ್ತಿದ್ದರು. ನಾವು ಅವರಿಗಿಂತಲೂ ಉತ್ತಮವಾಗಿದ್ದೇವೆ ಎಂಬ ತಪ್ಪು ಕಲ್ಪನೆ ನಮ್ಮಲ್ಲಿ ಮನೆಮಾಡಿಕೊಂಡಿದೆ. ಆದರೆ ಉತ್ತಮ ನಾಗರಿಕನಾರು ? ಎಂಬ ಪ್ರಶ್ನೆಗೆ ಉತ್ತರಿಸಬೇಕಾದರೆ ನಿಜವಾದ ಮಾನವೀಯತೆಯನ್ನು ನಿರ್ಣಯ ಮಾಡುವ ಮೂಲಭೂತವಾದ ಈ ನಾಲ್ಕು ಪ್ರಶ್ನೆಗಳಿಗೆ ಯಾರು ಸಮರ್ಪಕವಾಗಿ ಉತ್ತರ ಕೊಡಬಲ್ಲರೋ ಅವರೇ ನಿಜವಾದ ನಾಗರೀಕರು. ಆ ಪ್ರಶ್ನೆಗಳು ಯಾವುವೆಂದರೆ ನಾನು ಯಾರು ? ಎಲ್ಲಿಂದ ಬಂದೆ ? ನನ್ನ ಕರ್ತವ್ಯವೇನು ? ನಾನು ಮುಟ್ಟಬೇಕಾದ ಗುರಿ ಯಾವುದು ? ಇದೇ ನಿಜವಾದ ಮಾನವನ ಜೀವನದ ರಹಸ್ಯ–ಇದರ ಅರಿವೇ ಮಾನವೀಯತೆ. ಅದೇ ಉತ್ತಮ ನಾಗರೀಕತೆ. ಕೇವಲ ಹೊರಗಿನ ವೇಷಭೂಷಗಳಿಂದ ನಾಗರೀಕನಾಗಲಾರ. ಅಂತಃಕರಣ ವಿಕಾಸಗೊಂಡವನು ನಾಗರೀಕ. ಅಂತಃಕರಣ ಶುದ್ಧಿಯಾದರೆ ಶರೀರ ಶುದ್ಧಿ. **“ಶರೀರಮಾಧ್ಯಂ ಖಲುಧರ್ಮ ಸಾಧನಂ”** ಆದ್ದರಿಂದ ಧರ್ಮ ಪರಿಪಾಲನೆ ಜೀವನದ ನೆಮ್ಮದಿಗಾಯೇ ಹೊರತು ಬರಿ ಗೊಡ್ಡುಪುರಾಣವಲ್ಲ. ಒಣ ವೇದಾಂತವಲ್ಲ. ಧರ್ಮದ ಮೂಲ ಧ್ಯೇಯ ಬಡತನ ನಿವಾರಣೆಯಾಗಬೇಕು. ಸುಖ ಸಮೃದ್ಧಿ ಜೀವನ ಸಾಗಬೇಕು. ಆಗ ಸ್ವಾತಂತ್ರ್ಯಕ್ಕೆ ನಿಜವಾದ ಅರ್ಥ. ಸ್ವಾತಂತ್ರ್ಯ ಬಂದ ಮೇಲೆ ದುಡಿಮೆಯ ಮನೋಧರ್ಮ ಕಡಿಮೆಯಾಗಿದೆ. ಸೋಮಾರಿತನ ಹೆಚ್ಚಿದೆ. ಬಸವಣ್ಣನವರು ಇಲ್ಲಿ ಎಚ್ಚರಿಸುತ್ತಾರೆ. ದುಡಿದು ತಿನ್ನಬೇಕು ದುಡಿಯದೇ ಅನುಭವಿಸುವುದು ಪಾಪಕರವಾದುದು. **“ದುಡಿಮೆಯೇ ದೇವರು”**, **“ಕಾಯಕವೇ ಕೈಲಾಸ”** ಎಂದರು. ತನ್ನ ದೇಹವನ್ನು ಬಳಲಿಸಿ ಕಾಯಕ ಮಾಡಿ ಅನುಭವಿಸಬೇಕು. ಅಣ್ಣನವರ ಕಾಯಕದಲ್ಲಿ ಸ್ವಾವಲಂಬನೆ ಮತ್ತು ಸಮರ್ಪಣಾ ಮನೋಭಾವ ಎರಡೂ ಸಮರಸಗೊಂಡಿದೆ. **“ಕಾಯಕವ ಕಲಿಸುವುದಕೆ ನಾಯಕನು ಬಸವಯ್ಯಾ”** ಎಂದು ಜಾನಪದ ಜಗತ್ತು ಅತ್ಯಂತ ಮಾರ್ಮಿಕವಾಗಿ ಅಣ್ಣನವರ ಕಾಯಕದ ಮಹತ್ತು ಮತ್ತು ಅದರಿಂದ ಉಂಟಾದ ಸಾಮಾಜಿಕ ನೆಮ್ಮದಿಯನ್ನು ಚಿತ್ರಿಸಿದೆ. ಅಣ್ಣನವರು ಸಾರಿದ ಕಾಯಕದ ಪ್ರಧಾನ ಲಕ್ಷಣಗಳು **“ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ”** ಮುಂತಾದ ಸದ್ಭಾವನೆ, ಸದ್ವಿಚಾರ, ಸತ್ಕ್ರಿಯೆಗಳನ್ನು ತಂದು ಮಾನವ ಜಗತ್ತಿಗೆ ನೀಡಿದ ದೇವಶಿಲ್ಪಿ ಬಸವಣ್ಣನವರು. ಭಗವಂತ ನಮಗೆ ಎಲ್ಲ ವಿಧವಾದ ಸಂಪನ್ಮೂಲಗಳನ್ನು ಕೊಟ್ಟಿದ್ದಾನೆ. ಅವು ಹೇರಳವಾಗಿವೆ. ಅವುಗಳನ್ನು ಸದುಪಯೋಗ ಮಾಡಿಕೊಳ್ಳಬೇಕು. ನಮ್ಮ ಬಡತನಕ್ಕೆ ಕಾರಣ ನಮ್ಮ ಕರ್ತವ್ಯಲೋಪ. ಅದರ ಪರಿಹಾರ ಮಾರ್ಗವೇ ಕಾಯಕ. ಆ ಕ್ರಿಯಾಶಕ್ತಿಯ ಸದುಪಯೋಗವಾಗಬೇಕು. ಆ ಪ್ರಯತ್ನದಲ್ಲಿ ನಮ್ಮ ಕಾಯಕ ಮನೋಭಾವ ಸಾಗಬೇಕು. ಅಣ್ಣನವರು ಕೊಟ್ಟ ಕಾಯಕ ಸೂತ್ರದಲ್ಲಿ ಸಂಗ್ರಹವುಂಟು ಅಸಂಗ್ರಹವಿಲ್ಲ. ಅಂದರೆ ತನಗೆ ಎಷ್ಟು ಬೇಕೋ

ಅಷ್ಟನ್ನು ಸಂಗ್ರಹಿಸಬೇಕು. ಅವತ್ತಿಗೆ ಸಾಕು. ನಾಳೆಗೆ ಸಂಗ್ರಹ ಬೇಡ ಎನ್ನುವ ಸಿದ್ಧಾಂತ. ಇದಕ್ಕೆ ಬಸವಣ್ಣನವರ ಜೀವನದ ಒಂದು ಪ್ರಸಂಗವನ್ನು ಕೊಡುವುದಾದರೆ ಹೆಂಡತಿಯ ಕಿವಿಯಲ್ಲಿದ್ದ ಓಲೆಯನ್ನು ಕಳಚಲು ಬಂದಾಗ ಬಸವಣ್ಣನವರು ಹೇಳುವ ಮಾತು, **"ಕಳ್ಳನ ಮನೆಗೆ ಬಲುಗಳ್ಳ ಬಂದ, ಕಳಚಿಕೊಡೆ ಎಲೆ ಚಂಡಾಲಗಿತ್ತಿ ಅಯ್ಯನ ಕೈ ನೊಂದೀತು''** ಎನ್ನುವ ಬಸವಣ್ಣನವರ ಮಾತಿನಲ್ಲಿ ಎಂತಹ ಆತ್ಮ ಪರಿಶೋಧನೆ ಎಂಬುದು ಅರ್ಥವಾಗುತ್ತದೆ. ಸಂಗಮ ದೇವನೇ ಈ ರೂಪದಲ್ಲಿ ಬಂದಿದ್ದಾನೆ. ಬಡವನಿಗೆ ಸಾಧ್ಯವಾಗದ ಬಂಗಾರವನ್ನು ನಾನು ಸಂಗ್ರಹಿಸಿರುವುದು ಕಳ್ಳತನವೇ. ಬಂಗಾರದ ಸಂಗ್ರಹವು ಮಹಾಪಾತವೆಂಬ ಪ್ರಜ್ಞೆ. ಆದ್ದರಿಂದ ಹೆಚ್ಚಿನದಕ್ಕೆ ಕೈಹಾಕಕೂಡದು, ಆಶಿಸಬಾರದು, ಇದು ಕಾಯಕ ತತ್ತ್ವ ಕಾಯಕ ಜೀವಿಗೆ ಪರತಂತ್ರ ಜೀವನ ಸಾಧ್ಯವಿಲ್ಲ. ಸ್ವಾವಲಂಬನೆ ಮೈಗೂಡುತ್ತದೆ. ಎಂಬುದು ಅಣ್ಣನವರ ಉಪದೇಶ.

ಸಭೆಯಲ್ಲಿದ್ದ ಸಚಿವ ಶ್ರೀ ಲಕ್ಷ್ಮೀಪತಿಗಳ ಮಾತಿನ ಕಡೆ ಸನ್ನಿಧಿಯವರು ಗಮನ ಸೆಳೆಯುತ್ತಾ ಮಂತ್ರಿಗಳು ಕೆಲವು ಮುಖ್ಯ ವಿಷಯಗಳನ್ನು ಪ್ರಸ್ತಾಪ ಮಾಡಿದ್ದಾರೆ. "ನಾವು ಜನತಾ ಸೇವೆಗೋಸ್ಕರ ಪಣತೊಟ್ಟದ್ದೇವೆ. ನಿಸ್ವಾರ್ಥ ಸೇವಾ ಪ್ರತಿಜ್ಞೆ ಮತ್ತು ಆಡಂಬರಕ್ಕೆ ಅವಕಾಶ ಕೊಡುವುದಿಲ್ಲ" ಎಂದಿದ್ದಾರೆ. ಸರಕಾರದ ಈ ಧೋರಣೆ ಕೈಗೂಡಬೇಕಾದರೆ ಕೊನೇ ಪಕ್ಷ ಒಂದು ವರ್ಷವಾದರೂ ಬೇಕು. "ಇದು ಪರ್ವಕಾಲ. ಈ ವಿಷಮ ಸನ್ನಿವೇಶ ಮತ್ತು ಕ್ಷಾಮದ ಭೀತಿಯ ಮಧ್ಯೆ ನಾವು ಅಧಿಕಾರಕ್ಕೆ ಬಂದಿದ್ದೇವೆ". ಎಂದು ಸಚಿವರು ಹೇಳಿದ ಮಾತಿನಲ್ಲಿ ಸತ್ಯಾಂಶವಿದೆ. ಆದರೂ ಅಹಂಕಾರ ತ್ಯಾಜ್ಯ ಮಾಡಿ ಸೇವಾ ಮನೋಭಾವದಿಂದ ಆಡಳಿತ ನಡೆಸಿದರೆ ಆ ಕೃಪಾಕರಣ ದೃಷ್ಟಿಯಿಂದ ನಮ್ಮ ಎಲ್ಲ ಬವಣೆಗಳು ನಿವಾರಣೆಯಾಗುವುದರಲ್ಲಿ ಯಾರೂ ಸಂಶಯ ಪಡಬೇಕಾಗಿಲ್ಲ" ಎಂದು ಸಭೆಗೆ ಆಶೀರ್ವದಿಸಿದರು

---

ಗುರುವನು ನಂಬಿದವನು ಗುರುಭಕ್ತನಯ್ಯ<br>
ಲಿಂಗ ನಂಬಿದಳು ನೀಲಲೋಚನ ತಾಯಿ<br>
ಜಂಗಮ ನಂಬಿದರು ಬಸವ ದಂಡನಾಯಕ<br>
ಪಾದತೀರ್ಥವ ನಂಬಿದರು ಕೇಶರಾಜಯ್ಯಗಳು<br>
ಪ್ರಸಾದವ ನಂಬಿದರು ಬಿಬ್ಬಿಬಾಚಯ್ಯಗಳು<br>
ವಿಭೂತಿಯ ನಂಬಿದರು ಕುಂಬಾರ ಗುಂಡಯ್ಯರು<br>
ರುದ್ರಾಕ್ಷಿಯ ನಂಬಿದರು ಚೇರಮರಾಜರು<br>
ಮಂತ್ರವ ನಂಬಿದರು ಮಂತ್ರಜಾತವಡಿಯರು<br>
ಇಂತಿವರು ಅಷ್ಟಾವರ್ಣಗಳ ನಂಬಿಕೊಂಡು<br>
ಇಷ್ಟಲಿಂಗದೊಳಗಾಗಲಿಲ್ಲೆಂದ ನಮ್ಮ ಅಂಬಿಗರ ಚೌಡಯ್ಯ ||



# ಪರೋಪಕಾರವೆ ಪುಣ್ಯ; ಪರಪೀಡೆಯೇ ಪಾಪ

—ವೀರಭದ್ರಪ್ಪ ಅಂಪಾನಿ, ಗೋಕಾಕ

ದೇಹವಿರುವವರೆಗೆ ಕರ್ಮವನ್ನು ಮಾಡಲೇಬೇಕು. ಪಕ್ವಜ್ಞಾನ ಬರುವ ತನಕ ಕರ್ಮತ್ಯಾಗ ಹಿತವಲ್ಲ. ಫಲಾಪೇಕ್ಷೆಯನ್ನು ಬಿಟ್ಟು ಕರ್ಮ ಮಾಡುವುದರಲ್ಲಿಯೇ ತ್ಯಾಗವಿದೆ. ಮನುಷ್ಯನು ಮಾಡುವ ಕರ್ಮದ ಪ್ರತಿಫಲವೇ ಪುಣ್ಯ-ಪಾಪಗಳು. ಪರರಿಗೆ ಮಾಡುವ ಉಪಕಾರವೇ ಸತ್ಕರ್ಮ. ಅಪಕಾರವೇ ದುಷ್ಕರ್ಮ. ಪರರಿಗೆ ಮಾಡುವ ಉಪಕಾರದ ಮೇಲೆ ಪುಣ್ಯವನ್ನು ಮತ್ತು ಅಪಕಾರದ ಮೇಲೆ ಪಾಪವನ್ನು ಸಾಮಾನ್ಯವಾಗಿ ಅಳೆಯಬಹುದು. ಮಾಡಿದ ಪುಣ್ಯ-ಪಾಪಗಳಿಗೆ ಮನವೆ ಸಾಕ್ಷಿ. "ಪುಣ್ಯಸ್ಯ ಫಲಮಿಚ್ಛಂತಿ–ಪುಣ್ಯಂ ನ ಕುರ್ವಂತಿ ಮಾನವಾಃ" ಮಾನವನು ಪುಣ್ಯದ ಫಲ ಅಂದರೆ ಸುಖವನ್ನು ಮಾತ್ರ ಬಯಸುವನು ಆದರೆ ಪುಣ್ಯವನ್ನು ಮಾಡಲು ಅಪೇಕ್ಷಿಸಲಾರ. ಪಾಪವನ್ನು ಮಾಡಿದರೂ ಕೂಡ ಪುಣ್ಯದ ಫಲವನ್ನೇ ಬಯಸುವನು. ಆತ್ಮಜ್ಞಾನಿಗೆ ಕರ್ಮಗಳ ಫಲವಿಲ್ಲ. ಅಂದರೆ ಪುಣ್ಯ–ಪಾಪಗಳು ಅವನಿಗೆ ತಟ್ಟುವುದಿಲ್ಲ. ಸರ್ವ ಪಾಪಗಳಲ್ಲಿ ಪರರನ್ನು ನಿಂದಿಸುವುದೇ ಮಹಾಪಾಪ. ಪರರನ್ನು ಕಾಪಾಡುವುದೇ ಎಲ್ಲ ಪುಣ್ಯಗಳಲ್ಲಿ ಶ್ರೇಷ್ಠ ಪುಣ್ಯವು. ಎಂದು ನೀತಿಶಾಸ್ತ್ರವು ಹೇಳುವುದು. ಸದ್ಗುರುವಿನ ಹಿತೋಪದೇಶಗಳನ್ನು ಕೇಳಿ ಅದರಂತೆ ಅನುಸರಿಸಿ, ಆಚರಿಸಿ ನಡೆದಾಗಲೇ ಮಾನವನಿಗೆ ಮುಕ್ತಿ ಪ್ರಾಪ್ತವಾಗುವುದು ಎಂದು ನಿಜಗುಣಶಿವಯೋಗಿಗಳು ಹೇಳುವಾಗ್ಗೆ ಮೊದಲು ದುರಿತಕರ್ಮವನೊಲ್ಲದಿರು ಪುಣ್ಯವನೆ ಮಾಡು, ಅಂದರೆ ಪಾಪಕೃತ್ಯಗಳಿಂದ ದೂರವಿದ್ದು ಪುಣ್ಯಪ್ರದ ಕಾರ್ಯಗಳನ್ನು ಮಾಡು ಎಂದು ತಿಳಿಸಿದ್ದಾರೆ. ಎಲ್ಲ ಜೀವಾತ್ಮರು ದೇವರ ಮಕ್ಕಳು ನಿನ್ನಂತೆ ಅವರನ್ನು ಪ್ರೀತಿಸು. ಉಚ್ಚ-ನೀಚ ಭಾವನೆಗಳನ್ನು ತೊರೆದು ಸಹೋದರರಂತೆ ನಡೆದುಕೊಂಡು ಜನರ ಆದರಲ್ಲಿಯೂ ನಮ್ಮ ಪ್ರಾರ್ಥನೆಯನ್ನು ದೇವರಿಗೆ ಮುಟ್ಟಿಸುವ ಅಂಚೆ ಪೆಟ್ಟಿಗೆಗಳಂತಿರುವ ದೀನದಲಿತರ, ನಿರ್ಗತಿಕರ ಹಾಗೂ ರೋಗಿಗಳ ಸೇವೆಯೇ ದೇವರ ಸೇವೆ ಅಂತ ತಿಳಿದು ಮನಸ್ಸೊಪ್ಪುವಂತೆ ತನುಮನಧನದಿಂದ ಅವರ ಸೇವೆ ಮಾಡು, ಅದರಲ್ಲಿಯೇ ಪರೋಪಕಾರದ ಪ್ರಕಾಶವಿದೆ. ಕೆಡುವ ಶರೀರದ ಸಫಲತೆ ಯಾವುದೆಂದರೆ ಪರಹಿತ ಅಂತಾ ಜ್ಞಾನಿಗಳಾಡಿದ ಮಾತು.

ಸರ್ವವನ್ನರಿಯುವ ತಾನು ತನ್ನನರಿತು ಸಮನ್ವಯ ದೃಷ್ಟಿಯಿಂದ ಭೂತದಯಾಪರ ವೃತ್ತಿಯನ್ನರಿತು ತನ್ನ ಸ್ಥೂಲ ದೇಹದ ಮೂಲಕ ಮಾಡತಕ್ಕ ಸೇವೆಯೇ ಪರೋಪಕಾರ ಇದಕ್ಕೇ "ಪರೋಪಕಾರಾರ್ಥಂ ಇದಂ ಶರೀರಂ" ಎಂದುದು. ಕೂತುಂಡು

ಕೊಡುವ ದಾನಕ್ಕಿಂತ ಮಾಡುವ ಪರೋಪಕಾರವೆ ಮಿಗಿಲು. ಸರ್ವರ ಹೃದಯದಲ್ಲಿ ಪರಮಾತ್ಮನಿರುವುದರಿಂದ ಪರರಿಗೆ ಉಪಕಾರ ಮಾಡಿದರೆ ಪರಮಾತ್ಮನನ್ನೇ ಸಮೀಪ ಮಾಡಿಕೊಂಡಂತಾಗುತ್ತದೆ. ಪರರ ಉಪಕಾರ ಅಂದರೆ ( ಪರ=ಪರಮಾತ್ಮ+ ಉಪ=ಸಮೀಪ+ಕರ=ಮಾಡಿಕೊಳ್ಳು) ಪರಮಾತ್ಮನನ್ನು ಸಮೀಪಿಸಿಕೊಳ್ಳುವುದು ಪರೋಪಕಾರ ಗುಣವು ನಿಂತ ನೀರಿನಂತೆ-ತಮ್ಮವರಲ್ಲಿಯೇ ಸೀಮಿತವಾಗಬಾರದು. ಅದು ಹರಿಯುವ ನೀರಿನಂತೆ ಎಲ್ಲರಲ್ಲಿಯೂ ಎಲ್ಲದರಲ್ಲಿಯೂ ವ್ಯಾಪ್ತಿಯನ್ನು ಹೊಂದಿರಬೇಕು. "ಏನಕೇನ ಪ್ರಕಾರೇಣ ಕೋಹಿನಾನುಪಜೀವತಿ। ಪರೇಷಾಂ ಉಪಕಾರಾರ್ಥಂ ಯಜ್ಜೀವಂತಿ ಸ ಜೀವತಿ" ಹೀಗೆ ಒಂದು ಸೂಕ್ತ ವಚನವಿದೆ. ಅಂದರೆ ಯಾವುದೇ ಪ್ರಕಾರದಿಂದ ಯಾವುದೇ ಸಹಾಯವಿಲ್ಲದೆ ಯಾವನು ತಾನೇ ಜೀವಿಸುವುದಿಲ್ಲ. ಆದರೆ ಇನ್ನಿತರ ಉಪಕಾರಾರ್ಥವಾಗಿ ಯಾವನು ಜೀವಿಸುವನೋ ಅವನೇ ನಿಜವಾಗಿ ಜೀವಿಸುತ್ತಾನೆ. ಇನ್ನಿತರ ಉಪಕಾರಾರ್ಥವಾಗಿ ಯಾವನು ಜೀವಿಸುವುದಿಲ್ಲವೋ ಆತನ ಜೀವನ ವ್ಯರ್ಥ. ಅನ್ಯರ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವುದರಲ್ಲಿ ಪರೋಪಕಾರ ಗುಣವಿದೆ. "ಪ್ರಯಾಣಕಾಲೆಯೋ ಪರೋಪಕಾರಂ ಕರೋತಿ ಸಯೇವ ಪುಣ್ಯಮಾಪ್ನೋತಿ" ಯಾವನು ತನ್ನ ಜೀವನದಲ್ಲಿ ಸದಾ ಪರೋಪಕಾರವನ್ನು ಮಾಡುವನೋ ಅವನು ಮಾತ್ರ ಸುಖವನ್ನು ಹೊಂದುವನು. ತಾನು ಬಯಸುವುದನ್ನು ಅನ್ಯರಿಗೆ ಅದನ್ನು ಒದಗಿಸಿಕೊಡುವುದೇ ನಿಜವಾದ ಪರೋಪಕಾರಿಯ ಧರ್ಮ. ತನಗೆ ಯಾವುದು ಆಗಬಾರದೆಂಬ ಬಗ್ಗೆ ಮನಸ್ಸಿರುತ್ತದೆಯೋ ಅದು ತನ್ನಿಂದ ಇತರರಿಗೂ ಆಗದಂತೆ ಎಚ್ಚರಿಸುವುದೇ ಪರೋಪಕಾರಿಯ ಮನೋಧರ್ಮ. ಪರೋಪಕಾರಿಯ ಧರ್ಮದ ವಿಕಾಸ ಸದ್ಗುಣಗಳಿಂದಲೇ ಸಾಧ್ಯ. "ತ್ಯೇನ ತೆಕ್ತೇನ ಭುಂಜೀತಾಃ" ಅಂದರೆ ಈ ವಿಶ್ವದಲ್ಲಿರುವ ಎಲ್ಲ ವಸ್ತುಗಳೂ ಪರಮಾತ್ಮನಿಗೆ ಸೇರಿದವು. ಅವನ ಪರಿವಾರದ ಎಲ್ಲ ಮಾನವರಿಗೆ ಎಲ್ಲ ಪ್ರಾಣಿಗಳಿಗೆ ಕೊಟ್ಟು ಉಳಿದದ್ದನ್ನು ಅನುಭವಿಸು ಎಂದು ಈಶಾವಾಸ್ಯ ಉಪನಿಷತ್ತು ಹೇಳುತ್ತದೆ. ನಮ್ಮ ಕಣ್ಣೆದುರಿಗೆ ಹಸಿದು ಬಳಲುತ್ತಿರುವವರಿಗೆ ಒಪ್ಪತ್ತಿನ ಆಹಾರ ಒದಗಿಸೋಣ ಎಂಬ ಮಾನವೀಯತೆ ಬೇಕು. ಮೊದಲು ಅಂಥವರಿಗೆ ಕೊಟ್ಟು ನಾವು ಸೇವಿಸೋಣ ಎಂಬ ದೈವಭಕ್ತಿ ಇರಬೇಕು. ಇದರಲ್ಲಿಯೇ ಪರೋಪಕಾರದ ಪರಾಕಾಷ್ಠತೆ ಕಂಡು ಬರುವುದು. ಪರೋಪಕಾರವು ಒಳ್ಳೆಯದನ್ನು ಮಾಡುವ ಮನುಷ್ಯನಲ್ಲಿಯ ಒಂದು ಸ್ವಾಭಾವಿಕವಾಗಿರುವ ಉತ್ತಮ ಗುಣವು. ಇದಕ್ಕೆ ಹಣದ ಅವಶ್ಯಕತೆಯಿಲ್ಲ. ಮೇಲಾಗಿ ಹೆಚ್ಚಿಗೆ ಪರಿಶ್ರಮ ತೆಗೆದುಕೊಳ್ಳುವ ಆವಶ್ಯಕತೆಯೂ ಇಲ್ಲ. ಆದರೆ ದಯೆಯೊಂದಿದ್ದರೆ ಸಾಕು. ದಯವೇ ಪರೋಪಕಾರದ ಮೂಲ. ನಿರ್ದಯನ ಹೃದಯದಲ್ಲಿ ಪರೋಪಕಾರದ ವಾಸನೆಯೂ ಸಹ ಸುಳಿಯುಲಾರದು. ದಯವಿದ್ದರೆ ಮಾತ್ರ ಪರೋಪಕಾರ ಮಾಡುವ ಸುದ್ಬುದ್ಧಿಯು ಹುಟ್ಟುವುದು. ಕಾರಣ ಪರೋಪಕಾರವು ಸಹ ಧರ್ಮದ ಅತ್ಯಂತ ಪ್ರಧಾನ ಅಂಗವು. ದಲಿತೋದ್ಧಾರವು



ಹಿಂಸೆ, ಘೋಷಣೆಗಳಿಂದ ಮತ್ತು ಪ್ರಜಾಪತಿಯು ಮಾಡುವ ಶಾಸನಗಳಿಂದಲ್ಲ. "ಆತ್ಮವತ್ ಸರ್ವಭೂತೇಷು" ಮತ್ತು "ತನ್ನಂತೆ ಪರರ ಬಗೆದೊಡೆ ಕೈಲಾಸ ಬಿನ್ನಾಣವಕ್ಕು ಸರ್ವಜ್ಞ" ಎಂಬ ಮಾತನ್ನು ಅನುಸರಿಸಿ ವರ್ತಿಸಿದಾಗ ಮಾತ್ರ ಅದು ಸಾಧ್ಯ. ಪರರನ್ನು ದೂಷಿತಭಾವನೆಯಿಂದ ಕಾಣದೆ ಆತ್ಮೀಯತೆಯಿಂದ ಸಮಾನ ಗೌರವಭಾವದಿಂದ ಕಂಡಾಗ ದೋಷಗಳನ್ನು ಹುಡುಕುವ ಕೀಳು ಪ್ರವೃತ್ತಿ ನಮ್ಮಲ್ಲಿಂದ ತೊಲಗಿ ಇತರರಲ್ಲಿ ಗುಣಗಳನ್ನು ಒಳ್ಳೆಯದನ್ನು ಕಾಣುವಷ್ಟು ನಮ್ಮ ಹೃದಯ, ಮನಸ್ಸು, ಬುದ್ಧಿಗಳು ಪರಿಶುದ್ಧವಾಗುತ್ತವೆ. ಅಂತಹ ಹೃದಯ, ಮನಸ್ಸು, ಬುದ್ಧಿ ಪರಿಪಕ್ವವಾಗಿ ಪರರ ಬಗ್ಗೆ ದಯಾಗುಣ ಬಂದರೆ ಕೈಲಾಸವು ತಾನಾಗಿಯೇ ಆಮಂತ್ರಿಸುತ್ತದೆ. ಪರರಿಗೆ ತನುಮನ ಭಾವದಿಂದ ಉಪಕಾರ ಮಾಡುವುದೇ ಪುಣ್ಯ, ಪರರಿಗೆ ಪೀಡೆಯನ್ನು ಅಂದರೆ ಹಿಂಸೆಯನ್ನು ಕೊಡುವುದೇ ಪಾಪ. ಪರರ ಪೀಡೆಯಿಂದ ಗಳಿಸಿದ ಪಾಪಕರ್ಮವು ಕೂಡಲೇ ಕೆಟ್ಟ ಹಾಲಿನಂತೆ ಒಡೆಯುವುದಿಲ್ಲ. ಬೂದಿ ಮುಚ್ಚಿದ ಬೆಂಕಿಯಂತೆ ಪಾಪಿಯನ್ನು ಅದು ಸುಡುತ್ತಾ ಹೋಗುವುದು.

ಪರೋಪಕಾರದ ಗುಣವು ಸಹಾಯ ಮಾಡುವುದರಲ್ಲಿಯೇ ಹುದಗಿಕೊಂಡಿರುವುದು. ಗಾಳಿಯಿಲ್ಲದ ಬೆಂಕಿಯು ನಂದುವಂತೆ ಎಂಥ ಸಮರ್ಥನಿದ್ದರೂ ಕೂಡ ಸಹಾಯಕನಿಲ್ಲದೆ ತನ್ನ ಕಾರ್ಯವನ್ನು ಮಾಡಲಾರ. ಎಂಥ ಬಲಾಢ್ಯನಿದ್ದರೂ ನಿರಹಂಕಾರದಿಂದ ಸಹಾಯ ಪಡೆಯಬೇಕಾಗುತ್ತದೆ. ಸಂಘಟಿತವಾದಲ್ಲಿ ಶಕ್ತಿ ಸಾಮರ್ಥ್ಯವು ಹೆಚ್ಚುತ್ತದೆ. ಪರಸ್ಪರರಲ್ಲಿ ಭಾವೈಕ್ಯತೆಯನ್ನು ತಂದುಕೊಳ್ಳುವದರಲ್ಲಿಯೇ ಶ್ರೇಯಸ್ಸಿದೆ. ಸಹಕಾರ ತತ್ವದಲ್ಲಿ ಪರೋಪಕಾರ ಗುಣವು ಹಾಸುಹೊಕ್ಕಾಗಿದೆ. ಇಂದಿನ ಕಾಲದಲ್ಲಿ ಸಹಕಾರ ಮನೋಧರ್ಮವು ಕಡಿಮೆಯಾಗಿ ಒಳ್ಳೆಯ ಕಾರ್ಯವನ್ನು ಮಾಡುವವರಿಗೂ ಕೂಡ ಅವರ ಮೇಲೆ ದೋಷಗಳನ್ನು ಹೊರಿಸಿ ಅವರು ಮಾಡುವ ಸತ್ಕಾರ್ಯಗಳನ್ನುಸಹ ವಿಫಲಗೊಳಿಸುವ ಜನರೇ ಹೆಚ್ಚು. ಇನ್ನು ಕೆಲವರು ಒಳ್ಳೇ ಕಾರ್ಯ ಮಾಡುವವರನ್ನು ಬದಿಗಿರಿಸಿ ತಮ್ಮ ಪ್ರತಿಷ್ಠೆಯ ಸಲುವಾಗಿ ಹಾಗೂ ಸ್ವಂತದ ಲಾಭದ ಸಲುವಾಗಿ ಸಾರ್ವಜನಿಕ ಜೀವನದಲ್ಲಿ ಧುಮುಕಿ ಸೇವೆ ಮಾಡಿದರೂ ಅವರ ಸೇವೆಯು ನಿಜವಾದ ಸಹಾಯ ದೊರೆಯಲಾರದು. ಸಮಾಜ, ದೇಶ, ರಾಷ್ಟ್ರವು ಪ್ರಗತಿ ಪಥದಲ್ಲಿ ಸಾಗಬೇಕಾದರೆ ಪರಸ್ಪರ ಸಹಾಯ, ಸಹಕಾರ ಅವಶ್ಯವಿದೆ. ಕೆಟ್ಟ ಮನುಷ್ಯನಿಗೆ ಉಪಕಾರ ಮಾಡುವುದು ಒಳ್ಳೆಯವನಿಗೆ ಹಾನಿ ಮಾಡುವಷ್ಟೇ ಅಪಾಯಕಾರಿಯಾದರೂ ಕೆಟ್ಟ ಮನುಷ್ಯನಿಗೆ ಉಪಕಾರ ಮಾಡುವುದಕ್ಕಿಂತ ಒಳ್ಳೆಯವನಿಗೆ ಅಪಕಾರ ಮಾಡುವುದೇ ಲೇಸು ಅಂತ ಒಂದು ನೀತಿ ವಾಕ್ಯವಿದೆ. ಅಂದರೆ ಒಳ್ಳೆಯವನಿಗೆ ಅಪಕಾರ ಮಾಡಬೇಕಂತಲ್ಲ. ಆದರೆ ಕೆಟ್ಟ ಮನುಷ್ಯನಿಗೆ ಉಪಕಾರದ ಸದುಪಯೋಗವಾಗಲಾರದು. ದುಷ್ಟ

ಮನುಷ್ಯರು ಉಪಕಾರ ಮಾಡಿದವರಿಗೂ ಅಪಕಾರವನ್ನೇ ಮಾಡುವರು. ತಮಗೆ ಕೆಡುಕಾದರೂ ಅಡ್ಡಿಯಿಲ್ಲ. ಎರಡನೆಯವರಿಗೆ ಕೆಡಕನ್ನು ಬಯಸುವದೇ ದುರ್ಜನರ ಹಟಮಾರಿತನ. ಆದರೆ ಸಜ್ಜನರು ಅಪಕಾರ ಮಾಡಿದವರಿಗೂ ಉಪಕಾರವನ್ನೇ ಮಾಡುವರು. ದುಷ್ಟರು ಸತ್ತರೂ ಕೂಡ ಪರರಿಗೆ ಅಪಕಾರವನ್ನೇ ಮಾಡುವರು. ಆದರೆ ಸಜ್ಜನರು ತಮ್ಮ ಸ್ವಂತ ಜೀವನವನ್ನು ಉಳಿಸಿಕೊಳ್ಳಲೂ ಅಂಥ ಅನೀತಿಯುಕ್ತ ಕಾರ್ಯವನ್ನು ಮಾಡಲಾರರು. ಸಜ್ಜನರು "ಪರೋಪಕಾರಾರ್ಥಂ ಇಧಂ ಶರೀರಂ" ತಮ್ಮ ಶರೀರವನ್ನು ಪರೋಪಕಾರದ ಸಲುವಾಗಿಯೇ ಮುಡುಪಿಟ್ಟರೆ ದುರ್ಜನರು "ಪರಪೀಡನಾರ್ಥಂ ಇದಂ ಶರೀರಂ" ಪರರಿಗೆ ಹಿಂಸೆ ಮಾಡುವುದರಲ್ಲಿಯೇ ತಮ್ಮ ಶರೀರವನ್ನು ಸವೆಸುವರು. ಎರಡನೆಯವರಿಗೆ ಹಿಂಸೆ ಕೊಡುವ ಸಲುವಾಗಿಯೇ ತಾವು ಹುಟ್ಟಿಬಂದಿರುವರೆಂದು ಅನ್ನುವಂತೆ ವರ್ತಿಸುವ ಜನರೇ ಹೆಚ್ಚು.

ಮಾನವ ಜನ್ಮದ ಹಾಗೂ ಜೀವನದ ಶ್ರೇಷ್ಠತೆ ಪರೋಪಕಾರದಲ್ಲಿದೆ. ಪರೋಪಕಾರದ ಸಲುವಾಗಿ ನದಿಗಳು ಹರಿಯುತ್ತವೆ, ಗಿಡಗಳು ನೆರಳನ್ನೂ ಹಣ್ಣು ಹಂಪಲುಗಳನ್ನೂ ಕೊಡುತ್ತವೆ, ಪಶುಗಳು ಹಾಲನ್ನು ಕೊಡುತ್ತವೆ, ಗೋವು ಇಟ್ಟ ಸಗಣಿಯನ್ನು ತಟ್ಟಿ ಕುಳ್ಳುಮಾಡಿ ಸುಟ್ಟರೆ ಅದು ನೊಸಲಿಗೆ ವಿಭೂತಿಯಾಗಿ ಪಾಪಪರಿಹಾರಕ್ಕೆ ಒಳ್ಳೆ ಉಪಕಾರಿಯಾಗುವುದು. ಇವೆಲ್ಲವು ಇರುವುದು ಪರೋಪಕಾರಕ್ಕಲ್ಲದೇ ಸ್ವಉಪಭೋಗಕ್ಕಲ್ಲ. ಆದರೆ ಬುದ್ಧಿಜೀವಿಯಾದ ಮಾನವನಿಗೆ ಪರೋಪಕಾರದ ಗುಣವು ಇಲ್ಲದಿದ್ದರೆ ಅವನ ಜೀವನ ಇವುಗಳಿಗಿಂತ ಕೀಳು. ಇನ್ನೊಬ್ಬರನ್ನು ಬದುಕಿಸುವುದರ ಮೇಲೆ ಮನುಷ್ಯನ ಬೆಲೆ ಕಟ್ಟಬೇಕಾಗುತ್ತದೆ. ಸಂಪತ್ತು, ವಿದ್ಯೆ, ಶಕ್ತಿ, ಸಮಯ ಎಲ್ಲರ ಒಳಿತಿಗಾಗೆ ಉಪಯೋಗಿಸಬೇಕಾದದ್ದು ಮಾನವ ಧರ್ಮ. ತನಗೆ ಒಳ್ಳೆಯದನ್ನು ಮಾಡಿಕೊಳ್ಳುವವನು ಮೊದಲು ಇನ್ನೊಬ್ಬರಿಗೆ ಒಳ್ಳೆಯದನ್ನು ಮಾಡಬೇಕಾಗುತ್ತದೆ. ಮನುಷ್ಯ ಜೀವನದಲ್ಲಿ ನಿಶ್ಚಯವಾಗಿ ಅತ್ಯಂತ ಸುಖಕರವಾದ ಕಾರ್ಯವು ಎರಡನೇಯವರಿಗೆ ಒಳ್ಳೆಯದನ್ನು ಮಾಡುವುದರಲ್ಲಿಯೇ ಅದೆ. ಮದವೇರಿದ ಬಲಶಾಲಿ ಆಡಳಿತಗಾರನ ಹಾಗೂ ಮದಾಂಧನಾದ ಧನಿಕನ ಬಗೆಗೆ ಜನರ ಹೆದರಿಕೆ ಹಾಗೂ ತಿರಸ್ಕಾರವಿರುವುದು. ಆದರೆ ಸಜ್ಜನರ ಮತ್ತು ಪರೋಪಕಾರ ಮಾಡುವ ಪುಣ್ಯ ಪುರುಷರ ಬಗ್ಗೆ ಜನರ ಗೌರವವಿರುತ್ತದೆ. ಪರೋಪಕಾರಿಯು ಕರ್ಪುರದಂತೆ ಸುಟ್ಟುಕೊಂಡು ಸಮಾಜಕ್ಕೆ ಶಾಂತಿ- ಎಂಬ ಬೆಳಕನ್ನು ಕೊಡುತ್ತಾನೆ. ಕೊಟ್ಟು ಬದುಕುವುದಕ್ಕಿಂತ- ಶ್ರೇಷ್ಠವಾದ ಗುಣ ಬೇರೊಂದಿಲ್ಲ. ಆಪತ್ಕಾಲದಲ್ಲಿ ನೆರವಾಗುವವನೆ ಪರೋಪಕಾರಿ ಅವನೇ ನಿಜವಾದ ಬಂಧು. ಪರರಿಗೆ ಕೊಟ್ಟ ಮೇಲೆ ಯಾವುದು ಉಳಿಯುವುದೋ ಅದೇ ತನಗೆ. ಬಚ್ಚಿಟ್ಟದ್ದು ಯಾವುದೋ ಅದು ಪರರಿಗೆ. ಇದಕ್ಕೊಂದು ಉದಾಹರಣೆ ಕೊಡುವುದಾದರೆ–



ಒಂದಾನೊಂದು ಕಾಲದಲ್ಲಿ ಒಂದು ಊರಲ್ಲಿ ಒಬ್ಬ ಧನಿಕನಿದ್ದನು. ಎಂಥ ಹಿರಿದಾದ ಸಿರಿಸಂಪತ್ತು ಬಂದೊದಗಿದಾಗ ವಿನಯವನು ಕೊಡು ಅಂತಾ- ಜ್ಞಾನಿಗಳಾಡಿದ ಮಾತುಗಳನರಿಯದೆ ಆತ ಪಿತ್ರಾರ್ಜಿತ ಆಸ್ತಿಯಿಂದ ಹಣವನ್ನು ಹೆಚ್ಚಿಗೆ ಸಂಪಾದಿಸಿದನೆಂಬುದನ್ನು ಮರೆತು ತಾನೇ ತನ್ನ ಪ್ರಯತ್ನದಿಂದ ಹೇರಳ ಹಣವನ್ನು ಸಂಪಾದಿಸಿದನೆಂಬ ಅಹಂಕಾರ ಅವನಲ್ಲಿ ತುಂಬಿ ತುಳುಕುತ್ತಿತ್ತು. ತನ್ನ ಒಡಹುಟ್ಟಿನ ಅಣ್ಣತಮ್ಮಂದರಿಗೆ ತಾನು ಸತ್ತಮೇಲೆಯಾದರೂ ಕೂಡ ತಾನೇ ಗಳಿಸಿದ ಹಣವು ಅವರಿಗೆ ದೊರೆಯಬಾರದೆಂಬ ದುರುದ್ದೇಶದಿಂದ ಹಣವನ್ನು ಹೂಳಿಟ್ಟನು. ಇದನ್ನು ತನ್ನ ಎಲ್ಲ ಮಕ್ಕಳಿಗೆ ತಿಳಿಸಿದನು. ಮುಂದೆ ಕೆಲವು ವರ್ಷಗಳು ಗತಿಸಿದವು. ತನ್ನ ಎಲ್ಲ ಮಕ್ಕಳು ಸತ್ತರು. ಮುಂದೆ ತಾನೂ ಸತ್ತನು. ಹುಗಿದಿಟ್ಟ ಹಣವು ಪರರ ವಶವಾಯಿತು, ಇದ್ದಾಗ ಕೊಡದವನು ಎದ್ದಾಗ ಕೊಡಲಾರ, ಕಾರಣ ಜೀವವಿರುವಾಗಲೇ ಕೊಟ್ಟದ್ದು ಮುಂದೆ ಕಟ್ಟಿಟ್ಟ ಬುತ್ತಿಯಾಗುವುದು, ಜೀವನೋಪಾಯಕ್ಕಾಗಿ ಸತ್ಯ ಶುದ್ಧವಾದ ಉದ್ಯೋಗದಿಂದ ಬಂದ ಹಣವನ್ನು ಸ್ವಹಿತದೊಂದಿಗೆ ಪರಹಿತಕ್ಕಾಗಿ ನಿರ್ವಂಚನೆಯಿಂದ ಬಳಸುವುದು ಕಾಯಕ. ಇಂಥ ಕಾಯಕದಲ್ಲಿ ಪರೋಪಕಾರದ ಗುಣವಿದೆ. ತನಗಾಗಿ ಮಾಡುವುದು ಉಪಜೀವನ ಪರಹಿತಕ್ಕಾಗಿ ಮಾಡುವುದು ಜೀವನ. ಪರಹಿತವೆ ಶಿವಹಿತವೆಂದು ಮಾಡುವುದು ಶಿವಜೀವನ. ಇಂಥ ಶಿವಜೀವನವೇ ಶರಣರ ದಾಸೋಹದಲ್ಲಿ ಅಡಕವಾಗಿದೆ.

ಪರೋಪಕಾರದಲ್ಲಿ ಉತ್ತಮ, ಮಧ್ಯಮ, ಕನಿಷ್ಠ ಅಂತಾ ಮೂರು ವರ್ಗಗಳನ್ನು ಪೂರ್ವಾರ್ಜಿತರು ಮಾಡಿದರೂ ಇಂದಿನ ಕಾಲದಲ್ಲಿ ಅದರಲ್ಲಿ ಐದು ವರ್ಗಗಳಾದದ್ದು ಕಂಡು ಬರುವುದು. ಯಾರು ತಮ್ಮ ಸ್ವಾರ್ಥವನ್ನು ಬಿಟ್ಟು ಪರರಿಗೆ ಉಪಕಾರ ಮಾಡುವರೋ ಅವರು ಉತ್ತಮರು. ತಮ್ಮ ಸ್ವಾರ್ಥಕ್ಕೆ ಧಕ್ಕೆ ಬಾರದಂತೆ ಬೇರೆಯವರಿಗೆ ಉಪಕಾರ ಮಾಡುವವರು ಮಧ್ಯಮ ವರ್ಗದವರು. ಸ್ವಾರ್ಥಕ್ಕೋಸ್ಕರ ಪರಹಿತಕ್ಕೆ ಅಡ್ಡಿ ಆತಂಕಗಳನ್ನೊಡ್ಡುವವರು ಕನಿಷ್ಠ ವರ್ಗದವರು. ಇನ್ನು ತಮ್ಮ ಸ್ವಂತದ ಪ್ರಯೋಜನವಿಲ್ಲದಿದ್ದರೂ ಬೇರೆಯವರ ಅಹಿತವನ್ನು ಬಯಸುವವರು ಅಧಮರು. ಆದರೆ ತಮಗೂ ಕೆಡಕಾದರೂ ಅಡ್ಡಿಯಿಲ್ಲ. ಬೇರೆಯವರಿಗೆ ಕೆಡಕನ್ನೇ ಬಯಸುವವರು ಎಂಥ ನೀಚರೆಂಬದನ್ನು ವರ್ಣಿಸಲಿಕ್ಕೆ ಬಾರದು. ಕಾಲಾನುಸಾರ ಮೊದಲಿನ ವರ್ಗದವರ ಸಂಖ್ಯೆ ಕಡಿಮೆಯಾಗಿ ಕೊನೆಯ ವರ್ಗದವರ ಸಂಖ್ಯೆ ಹೆಚ್ಚುತ್ತಲೇ ಇದ್ದದ್ದು ಕಂಡುಬರುವುದು. ಮನುಷ್ಯನಾಗಿ ಹುಟ್ಟಿಬಂದ ಮೇಲೆ ತನ್ನ ಹಿತದೊಂದಿಗೆ ಬೇರೆಯವರ ಹಿತವನ್ನು ಬಯಸುವ ಮನೋಧರ್ಮವನ್ನು ಬೆಳೆಯಿಸಿಕೊಳ್ಳುವುದರಲ್ಲಿಯೇ ತನ್ನ ಜೀವನದ ಸಫಲತೆ ಹಾಗೂ ಸಾರ್ಥಕತೆಯಿದೆ.

# ‘ಒಂದು ಪವಾಡ’

—ಡೊ. ಚಿಕ್ಕೀರಪ್ಪ, ಎಚ್.ಎ.ಎಲ್., ಬೆಂಗಳೂರು.

೧೯೭೩ ಆಶ್ವಯುಜ ಮಾಸ. ತುಮಕೂರು ಪ್ರಥಮ ದರ್ಜೆ ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದೆ. ಮಹಾ ವಿದ್ಯಾಲಯಕ್ಕೆ ನೊಂದಣಿಯಾಗಿ ಮೂರು ತಿಂಗಳು ಕಳೆಯುವಷ್ಟರಲ್ಲಿ ಪದವಿ ಪಡೆಯುವ ನನ್ನ ಆಶಾಗೋಪುರ ಬಿರುಗಾಳಿಗೆ ಸಿಕ್ಕ ತರಗೆಲೆಯಂತಾಗಿತ್ತು. ವಿದ್ಯಾಭ್ಯಾಸ ಮುಂದುವರೆಸಲು ಭರಿಸಲಾಗದ ಆರ್ಥಿಕ ಮುಗ್ಗಟ್ಟು. ಹಳ್ಳಿಗೆ ಹಿಂತಿರುಗಿ ವ್ಯವಸಾಯದ ಕೆಲಸದಲ್ಲಿ ತಂದೆಯವರಿಗೆ ಸಹಾಯ ಮಾಡುವುದು ಎಂದು ಅಂತರಾತ್ಮ ಹೇಳುತ್ತಿದ್ದರೂ, ಎಷ್ಟು ದಿವಸಗಳು ಈ ಸಹಾಯ? ಇರುವ ಭೂಮಿಯಾದರೋ ಅತ್ಯಲ್ಪ. ಅದರಲ್ಲಿ ಮುಂದೆ ಪಂಚಪಾಂಡವರಂಥ ನಮ್ಮೆಲ್ಲರ ಬದುಕು ಹೇಗೆ? ಪಂಚ ಕನ್ಯೆಯರಂತಿರುವ ಒಬ್ಬ ಅಕ್ಕ ಮತ್ತು ನಾಲ್ಕು ತಂಗಿಯರ ವಿವಾಹದ ಖರ್ಚು ಭರಿಸಲು ಸಾಧ್ಯವೆ? ಏನೇನೋ ಆಲೋಚನೆಗಳಿಂದ, ಇನ್ನೂ ಬಾಲ್ಯಾವಸ್ಥೆಯಲ್ಲಿದ್ದ ನನ್ನ ಮನಸ್ಸು ತುಮುಲದಲ್ಲಿ ಮುಳುಗಡೆಯಾಯಿತು. ಹಿಂದೊಮ್ಮೆ ಪ್ರಾಥಮಿಕ ವಿದ್ಯಾಭ್ಯಾಸ ಮುಗಿಸಿ ಪ್ರೌಢ ವಿದ್ಯಾಭ್ಯಾಸಕ್ಕೆ ಹೋಗುವ ಸಂದರ್ಭದಲ್ಲಿ, ಇಂತಹದೇ ಪರಿಸ್ಥಿತಿಯೊದಗಿದಾಗ ಬಹಳ ಪ್ರಯಾಸದಿಂದ ಭಗವಂತನ ಕರುಣೆಯಿಂದ ಅನಾಯಾಸವಾಗಿ ಬಿಡುಗಡೆ ಹೊಂದಿದೆ. ಮಹಾ ವಿದ್ಯಾಲಯದ ಖರ್ಚನ್ನು ನಿಭಾಯಿಸುವುದು ದುಸ್ಸಾಧ್ಯವೆನಿಸಿತು. ದೇವರು ನನ್ನನ್ನು ಏಕೆ ಒಕ್ಕಲಿಗರ ವಂಶದಲ್ಲಿ ಹುಟ್ಟಿಸಿದ? ನನ್ನ ವಂಶದಲ್ಲಿ ಒಬ್ಬನನ್ನಾದರೂ ವಿದ್ಯಾವಂತನನ್ನಾಗಿ ಮಾಡುತ್ತೇನೆ ಎಂದು ಛಲತೊಟ್ಟ ಪೂಜ್ಯ ತಾತ ದೊಡ್ಡೀರಪ್ಪನವರ ಆಶೆಯ ಕುದುರೆ ಅವರೆದುರಿಗೇ ಕಾಲುಮುರಿದು ಬೀಳುವಂತಾಗಿದೆ! ನಮ್ಮ ಹುಡುಗ “ಯಾವ ಕ್ಲಾಸ್ನಾಗೂ ಹಿಂದಾಗ್ನಿಲ್ಲ, ಊರಾಗ್ನ ಎಲ್ಲಾ ಹುಡ್ಗುರ್ಗಿಂತ ಮುಂದ್ಕೋಯ್ತಾವ್ನೆ” ಎಂದು ಸಂತೋಷ ಮತ್ತು ಹೆಮ್ಮೆಯಿಂದ ಊರವರಲ್ಲಿ ಹೇಳುತ್ತಿದ್ದ ತಂದೆ ತಾಯಿಗಳ ಸ್ಥಿತಿ ಏನಾಗಬಹುದು? ಅವರು ಹೇಗೆ ಹಳ್ಳಿಯವರಿಗೆ ತಮ್ಮ ಮುಖ ತೋರಿಸುವರು? ನಾನು ಬಾಲಕನಾಗಿದ್ದಾಗಿನಿಂದಲೂ, ನನ್ನ ಅಲ್ಪ ವಿದ್ಯಾಸಂಪತ್ತಿಗೆ ಮಹಾನ್ ಗೌರವವನ್ನು ಕೊಟ್ಟು ಉಚ್ಚ ಸ್ಥಾನದಲ್ಲಿರಿಸಿದ್ದ ಹಳ್ಳಿಯವರಿಗೆ ಹೇಗೆ ನನ್ನ ಮುಖ ತೋರಿಸುವುದು? ಇಂತಹ ನಿಸ್ಸಹಾಯಕ ಸ್ಥಿತಿಯಲ್ಲಿ ಮುಳುಗಿಸಿದ ನನ್ನ ಆಲೋಚನೆಯ ಭೂತ, ರೋಗ ಉಲ್ಬಣಿಸಿ ಅತಿ ಪ್ರಜ್ಞಾ ಶೂನ್ಯತೆಯಲ್ಲಿ ಚಡಪಡಿಸುವ ರೋಗಿಯಂತೆ ಏನೇನೋ ಬಡಬಡಿಸತೊಡಗಿದೆ. ದುಃಖ ಉಮ್ಮಳಿಸಿ ಬರುತ್ತಿತ್ತು, ಕೋಣೆಯಲ್ಲಿ ಯಾರೂ ಇಲ್ಲ, ಒಬ್ಬನೇ ಗೆಳೆಯ ರಂಗಧಾಮಯ್ಯನೂ ಊರಿಗೆ ಹೋಗಿದ್ದ, ಮನಸ



ತಣಿಯುವವರೆಗೆ ಕಂಬಳಿ ಮೇಲೆ ಹೊರಳಾಡುತ್ತಾ ಅಳುತ್ತಿದ್ದೆ, ಈ ಅಳುವಿನ ಆಳದಲ್ಲಿ ನಿದ್ರೆ ಆವರಿಸಿದ್ದೇ ತಿಳಿಯಲಿಲ್ಲ.

ಮುಂಜಾನೆ ಏಳುವಾಗ್ಗೇ ಮನಸ್ಸು ತುಂಬ ಉಲ್ಲಸಿತವಾಗಿತ್ತು. ರಾತ್ರಿಯ ದುಃಖ, ದುಗುಡದ ಪರಿವೆಯೇ ಇಲ್ಲ, ದೇಹದಲ್ಲೇನೋ ನವಶಕ್ತಿ ಪ್ರವಹಿಸುತ್ತಿರುವಂತೆ ಭಾಸವಾಯಿತು. ಕೊರೆಯುವ ಚಳಿಯಲ್ಲೂ ತಣ್ಣೀರ ಸ್ನಾನ ಮಾಡಿದಾಗ ಉಂಟಾದ ನಡುಕದಲ್ಲಿ ಮನಸ್ಸನ್ನು ಮುಚ್ಚಿದ್ದ ಅಂಧಕಾರದ ತುಮುಲವೆಲ್ಲಾ ಬಿಟ್ಟೋಡಿದಂತೆ. ಮೆಯ್-ಮನಸ್ಸು ಅನಿರ್ವಚನೀಯ ಆನಂದದ ಸವಿಯಲ್ಲಿತ್ತು, ಹಂಚಿಕೊಳ್ಳಲು ಗೆಳೆಯನೂ ಇರಲಿಲ್ಲ, ಅಲ್ಲದೆ ಮಹಾ ವಿದ್ಯಾಲಯಕ್ಕೆ ಅಂದು ಬಿಡುವು.

ಒಬ್ಬನೇ ಎಷ್ಟು ಹೊತ್ತು ಕೋಣೆಯಲ್ಲಿರುವುದು? ಮಾನವ ಸಂಘಜೀವಿಯಲ್ಲವೆ? ಮನಸ್ಸಿಗೆ ಸಮಾಧಾನವಾಗುವ ತಾಣಕ್ಕೆ ಹೋಗಬೇಕೆಂಬ ಬಯಕೆಯಾಯಿತು. 8 ಘಂಟೆಗೆಲ್ಲಾ ಉಪಾಹಾರ ಮುಗಿಸಿ ಅನ್ಯಮನಸ್ಕನಾಗಿ ಸಿದ್ಧಗಂಗಾ ಕ್ಷೇತ್ರದ ಕಡೆ ಕಾಲೆಳೆದೆ. ತುಮಕೂರು ಸೇರಿ ಮೂರು ತಿಂಗಳುರುಳಿದ್ದರೂ, ಒಮ್ಮೆಯೂ ಇಲ್ಲಿಗೆ ಬರುವ ಯೋಚನೆ ಸುಳಿಯಲಿಲ್ಲ. ಶ್ರೀ ಕ್ಷೇತ್ರದ ಧರ್ಮಾಧಿಕಾರಿಗಳಾದ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ವ್ಯಕ್ತಿತ್ವ, ಉದಾರತೆ, ಸಂಸ್ಥೆಯನ್ನು ನಡೆಸಿಕೊಂಡು ಹೋಗುತ್ತಿದ್ದ ರೀತಿ ಬಹಳ ಕಷ್ಟ ಪರಿಸ್ಥಿತಿಯಲ್ಲಿ ಊಟೋಪಚಾರದ ವಿಷಯದಲ್ಲಿ ಅವರು ಹೇಗೆ ನಿಭಾಯಿಸುತ್ತಿದ್ದಾರೆ ಮುಂತಾಗಿ ಅಲ್ಲಿನ ಎಲ್ಲ ವಿವರಗಳೂ ಕರ್ಣಾಕರ್ಣಿಕೆಯಾಗಿ ಕೇಳಿದ್ದೆ. ಇದೆಲ್ಲಾ ನಿಜವಿರಬಹುದೆ? ಹಾಗಿದ್ದರೆ ನಾನೇತಕ್ಕೆ ನೇರವಾಗಿ ಅವರನ್ನು ಸಂದರ್ಶಿಸಿ ಅವರ ಆಶ್ರಯವನ್ನು ಕೋರಬಾರದು? ಆಶ್ರಯವಿತ್ತರೆ ನನ್ನ ವಿದ್ಯಾರ್ಥಿ ಜೀವನ ರಥ ಸುಗಮವಾಗುತ್ತದಲ್ಲಾ? ಈ ಆಲೋಚನೆಗಳ ಗುಂಗಿನಲ್ಲೇ ಶ್ರೀ ಕ್ಷೇತ್ರ ಸೇರಿದೆ. ಅಲ್ಲಿಗೆ ಬರುವ ಭಕ್ತಾದಿಗಳು ಮತ್ತು ಆಗಂತುಕರಲ್ಲೊಬ್ಬನಾಗಿ ಶ್ರೀ ಕ್ಷೇತ್ರದ ದರ್ಶನವನ್ನು ಪಡೆದು ಬಂದೆ. ಅಷ್ಟೊತ್ತಿಗೆ ಊಟದ ಸಮಯವಾಗಿತ್ತು. ಊಟದ ಸಾಲಿನಲ್ಲಿ ನಾನೂ ಒಬ್ಬನಾದೆ. ಊಟವಾಯಿತು. ಅಂದು ಹಬ್ಬದೂಟ. ಊಟದ ತೃಪ್ತಿಯಲ್ಲಿಯೇ ನನ್ನ ಬಯಕೆ ಈಡೇರುವುದೆಂಬ ಮುನ್ಸೂಚನೆ ನನ್ನ ಮನಸ್ಸಿಗಾಯಿತು.

ಊಟದ ನಂತರ ಎಲ್ಲ ವರ್ಗಗಳ ಜನರಿಗೆ ತಾರತಮ್ಯವಿಲ್ಲದೆ ಸೇವಾಕರ್ತರಾಗಿದ್ದ ಸಾಕಾರಮೂರ್ತಿ ಶ್ರೀ ಶ್ರೀ ಗಳವರನ್ನು ಕಂಡು, ನನ್ನ ಅಳಲನ್ನು ಅವರೊಂದಿಗೆ ತೋಡಿಕೊಂಡು ಅವರ ಮಾರ್ಗದರ್ಶನ ಪಡೆಯಬೇಕೆಂಬ ಅತೀವ ಆಶೆಯಿಂದ ದರ್ಶನಾರ್ಥಿಗಳ ಸಾಲಿನಲ್ಲಿ ನಾನೇ ಮುಂದಾದೆ.

ಸಂಜೆ 4 ಗಂಟೆಗಳ ಸುಮಾರಿಗೆ ದರ್ಶನ ಪ್ರಾಪ್ತಿ. ಶ್ರೀ ಶ್ರೀ ಗಳವರ ಪಾದ

ಕಮಲಗಳಿಗೆ ಸಾಷ್ಟಾಂಗವೆರಗಿ ನನ್ನ ಬಯಕೆಯನ್ನು ಅವರಲ್ಲಿ ಈ ರೀತಿ ಅರಿಕೆ ಮಾಡಿದೆ. "ಮಹಾಸ್ವಾಮಿ, ನನಗೆ ವಿದ್ಯಾಭ್ಯಾಸ ಮುಂದುವರೆಸಬೇಕೆಂಬ ಮಹದಾಸೆ. ನನ್ನ ಮನೆಯವರ ಪರಿಸ್ಥಿತಿ ಅದಕ್ಕೆ ಅನುಕೂಲವಾಗಿಲ್ಲ. ಉದರ ಪೋಷಣೆಗೇ ಕಷ್ಟವಾಗಿರುವ ಅತೀವ ಬಡತನ. ಇಂಥ ಪರಿಸ್ಥಿತಿಯಲ್ಲಿ ತಾವು ದೊಡ್ಡ ಮನಸ್ಸು ಮಾಡಿ ನಿಮ್ಮಲ್ಲಿ ಆಶ್ರಯ ವಿತ್ತರೆ ನನ್ನ ಜ್ಞಾನಾರ್ಜನೆಯ ದಾಹಕ್ಕೆ ನೀರು ಣಿಸಿದಂತಾಗುತ್ತದೆ" ಎಂದು ಅವರಲ್ಲಿ ಬಿನ್ನವಿಸುವಷ್ಟರಲ್ಲಿ ದುಃಖ ಉಮ್ಮಳಿಸಿ ಬಂತು.

ಎರಡು ನಿಮಿಷ ಮೌನ ವಾತಾವರಣ, ಶ್ರೀ ಶ್ರೀಗಳು ನನ್ನಲ್ಲೇ ದೃಷ್ಟಿ ದೃಢೀಕರಿಸಿ ನೋಡಿದರು. ಅವರ ನೋಟವನ್ನು ಎದುರಿಸಲಾಗದೆ ತಲೆ ಬಾಗಿದೆ. ಒಂದು ನಿಮಿಷ ಕಳೆಯುವುದು ಒಂದು ಯುಗದಂತಾಯಿತು. ನಿಧಾನವಾಗಿ ನನ್ನ ಬೆನ್ನ ಮೇಲೆ ಕೈಯಾಡಿಸಿ "ಏಳು ಮಗು" ಎಂದರು. ಅವರ ಕೈಯಿಂದ ಅಗೋಚರ ಶಕ್ತಿ ನನ್ನಲ್ಲಿ ಲೀನವಾದಂತಾಗಿ ಮೈ ಪುಳಕಿತವಾಯಿತು. ಜೊತೆಯಲ್ಲಿಯೇ ಅವರ ಅಮರ ಅಮೃತವಾಣಿ ನುಡಿಯಿತು. "ಮಗೂ, ಇಲ್ಲಿ ನೀನು ಆಶ್ರಯಾಭಿಲಾಷಿಯಾಗಿ ಬಂದಿರುವೆ. ಅದರ ಪ್ರಮೇಯ ನಿನಗಿಲ್ಲ. ನಿನಗೆ ದೇವರ ಆಶ್ರಯವಿದೆ, ಅದರ ಬಲದಿಂದಲೇ ಇದೂವರೆಗೂ ನಿನ್ನ ಬಯಕೆ ಬಳ್ಳಿಯನ್ನು ಚಿಗುರಿಸುತ್ತಾ ಬಂದಿದ್ದೀಯೆ. ಈಗ ನಿನ್ನ ಬಯಕೆಗೆ ಸ್ವಲ್ಪ ವಿಶ್ರಾಂತಿ ನೀಡಿ ನಿನ್ನ ಪಥ ಬದಲಾಯಿಸ ಬೇಕಾಗಿದೆ. ನಿನ್ನ ಕಷ್ಟ ಪರಿಹಾರವಾಗುತ್ತೆ. ನಿಮ್ಮ ಹಳ್ಳಿಗೆ ಈಗಿಂದೀಗಲೇ ಹೊರಟು ನಿನ್ನ ತಂದೆ ತಾಯಿಗಳ ದರ್ಶನ ಮಾಡು. ಮುಂದಿನ ಕೆಲಸ ಸುಗಮವಾಗುತ್ತೆ." ಎಂದರು. ನಾನೇ ಧನ್ಯ, ನನ್ನ ಭಾಗ್ಯಕ್ಕೆ ಎಣೆಯುಂಟೆ? ಮತ್ತೆ ಸಾಷ್ಟಾಂಗವೆರಗಿ, ಅವರ ಅಮೃತ ವಾಣಿಯನ್ನು ಮನನ ಮಾಡುತ್ತಾ ಅವರ ಆಶೀರ್ವಾದವನ್ನು ರಕ್ಷಣೆಯಾಗಿ ಪಡೆದು ಹೊರ ಹೊರಟೆ, ತುಮಕೂರು ಮುಟ್ಟುವಲ್ಲಿ 6 ಗಂಟೆಯಾಯಿತು.

ಹಳ್ಳಿಗೆ ಹೋಗುವ ಬಸ್ಸು ಅಂದಿಗೆ ಇರಲಿಲ್ಲ. ಮಾರನೇ ದಿನ ಮೊದಲನೇ ಬಸ್ "ಸಿದ್ಧಗಂಗಾ" ಹತ್ತಿ ಹನ್ನೊಂದು ಗಂಟೆಗೆಲ್ಲಾ ನನ್ನ ಊರಾದ ಆಂಧ್ರ ಪ್ರದೇಶದ ಹೊಟ್ಟುಬಿಟ್ಟವನ್ನು ಸೇರಿದೆ. ತಂದೆ ಪರವೂರಿಗೆ ಹೋಗಿದ್ದರು. ತಾಯಿ ಮತ್ತು ತಾತನವರಿದ್ದರು. ಯಾವ ವಿಶೇಷವೂ ಹಳ್ಳಿಯಲ್ಲಿರಲಿಲ್ಲ. ಅಂದಿನ ಅಂಚೆ ಬರಲು ಇನ್ನೂ ಒಂದು ತಾಸು ಸಮಯವಿತ್ತು. ಅಂಚೆ ಕಛೇರಿಯಲ್ಲಿಯೇ ಕಾದು ಕುಳಿತೆ. ಅಂಚೆ ಬಂದಿತು, ಒಂದೇ ಒಂದು ಕಾಗದವನ್ನು ಹೊತ್ತು. ಆಶ್ಚರ್ಯ! ನನಗೆ ಸಂದರ್ಶನ ಪತ್ರ! ಬೆಂಗಳೂರು ವಿಮಾನ ಕಾರ್ಖಾನೆಯಿಂದ! ಸಂತೋಷವನ್ನು ವರ್ಣಿಸಲಳವೇ? ಆದರೆ ಪತ್ರದ ಒಕ್ಕಣೆ ಓದಿದಾಗ ಅಷ್ಟೇ ನಿರಾಶೆಯಿಂದ ಜಂಘಾಬಲವೇ ಉಡಿಗಿ ಹೋಯಿತು. ಅಂದು 23-10-63 ಸಂದರ್ಶನವಿರುವುದು ಅಂದೇ ಬೆಳಿಗ್ಗೆ 8 ಗಂಟೆಗೆ. ಪತ್ರ ದೊರೆತಿದ್ದು ಅಂದೇ



12-15 ಕ್ಕೆ! ಮಾಡುವುದಾದರೂ ಏನು? ಕೈಗೆ ಬಂದ ತುತ್ತು ಬಾಯಿಗಿಲ್ಲವಾಯಿತಲ್ಲಾ? ಸಂದರ್ಶನ ಕೈಬಿಡಲು ಮನಒಪ್ಪಲಿಲ್ಲ. ಏಕೆ ಪ್ರಯತ್ನಿಸಬಾರದು? ಮನದ ಬಡಬಡಿಕೆ. ಅಂತೂ ನಿರ್ಧಾರಕ್ಕೆ ಬಂದೆ–ಸಂದರ್ಶನಕ್ಕೆ ಹೊರಡುವುದೆಂದು. ಮೇಲಾಗಿ ಶ್ರೀ ಶ್ರೀಗಳವರ ಅಭಯ ಹಸ್ತದ ರಕ್ಷಣೆ ನನಗಿರುವಾಗ ಏಕೆ ಹಿಂಜರಿಯುವುದು?

ಮನೆಯಲ್ಲಿ ತಂದೆಯವರಿಲ್ಲ. ತಾಯಿ, ತಾತನವರ ಹತ್ತಿರ ಹಣವಿರುವ ಸೂಚನೆಯಿಲ್ಲ. ಯಾರನ್ನು ಕೇಳುವುದು? ಕೇಳಿದರೆ ಕೊಟ್ಟಾರೆ? ಊರಲ್ಲಿ ಯಾರನ್ನು ಕೇಳಲು ಮನ ಒಪ್ಪಲಿಲ್ಲ. ತಾಯಿಯವರಿಗೆ ರಾಗಿ ರೊಟ್ಟಿ ಮಾಡಿ, ಕಡಲೆಕಾಯಿ ಚಟ್ನಿ ಮಾಡಲು ಹೇಳಿ, ಎರಡು ಮೈಲು ಅಂತರದ ಹಳ್ಳಿಗೆಹೋಗಿ ಅಲ್ಲಿ ಒಬ್ಬ ನನ್ನ ಸಹಪಾಠಿ ಮಿತ್ರನಿಂದ ಹತ್ತು ರೂಪಾಯಿ ಪಡೆದು ಹಿಂದಿರುಗಿದೆ. ಹಣ ಸಾಲದು. ಚಾರ್ಜಿಗಷ್ಟೇ ಸಾಕಾಗುತ್ತದೆ. ಧೈರ್ಯದಿಂದ ಪ್ರಯಾಣ ಬೆಳಸಿದೆ. ತಾತನವರು ಐದು ರೂಪಾಯಿಗಳನ್ನು ಅವರ ಪಂಚೆಯ ಗಂಟಿನಿಂದ ಬಿಚ್ಚಿ ತೆಗೆದುಕೊಟ್ಟರು. ಮನೆಯ ಯಾರಿಗೂ ಒಂದು ಪೈಸೆಯನ್ನೂ ಕೊಡದ ತಾತನವರ ಉದಾರತೆಗೆ ಎಲ್ಲರೂ ಉದ್ಗಾರವೆತ್ತಿದರು. ಅದು ನನ್ನ ಭಾಗದಪುಣ್ಯ.

24-10-83 ಬೆಳಿಗ್ಗೆ 6-30 ಕ್ಕೆ ಬೆಂಗಳೂರು ತಲುಪಿದೆ. 8 ಗಂಟೆಯೊಳಗೆ ವಿಮಾನ ಕಾರ್ಖಾನೆ ಉದ್ಯೋಗ ವಿನಿಮಯ ಕೇಂದ್ರದ ಮುಂದೆ ಹಾಜರಾದೆ. ಅಂದು ಬಂದಿದ್ದ ಅಭ್ಯರ್ಥಿಗಳು ಸುಮಾರು 100 ಮಂದಿ. ದುರ್ದೈವದ ಸಂಗತಿ. ಎಂದರೆ ಅದರಲ್ಲಿ 10 ಮಂದಿಯೂ ಕನ್ನಡದವರಿಲ್ಲ. ಇದ್ದರೂ ಸಹ ಕನ್ನಡದಲ್ಲಿ ಮಾತಾಡಿದರೆ ಅವರ ಯೋಗ್ಯತೆಗೆ ಕುಂದು ಎನ್ನುವಂಥವರಿದ್ದರು. ನನ್ನ ಸಂದರ್ಶನ ಚೀಟಿ ನೋಡಿದ ಉದ್ಯೋಗ ವಿನಿಮಯ ಕೇಂದ್ರದ ಗುಮಾಸ್ತರು "ನಿನಗೆ ಸಂದರ್ಶನವಾಗುವುದಿಲ್ಲ. ನಿನ್ನೆಯ ದಿನವೇ ಬರಬೇಕಾಗಿತ್ತು, ವಾಪಸ್ಸು ಹೊರಟು ಹೋಗು" ಎಂದರು. ನನ್ನ ಬೇಡಿಕೆ ನಿರರ್ಥಕವಾಯಿತು. ಹಿಂದಿರುಗಿಹೋಗಲು ಮನಸ್ಸೇಬಾರದು. ಅಲ್ಲೇ ಒಂದು ಮೂಲೆಯನಾಶ್ರಯಿಸಿ ಕುಳಿತೆ. ಸ್ವಲ್ಪ ಸಮಯದ ನಂತರ ಅದೇ ಕಛೇರಿಯ ಅಧಿಕಾರಿಯೊಂದು ನನ್ನ ಅಂತರಂಗ ಲೆಕ್ಕಹಾಕಿತು. ಮಿಂಚಿನಂತೆ ಅವರ ಮುಂದೆ ಸುಳಿದೆ. ನನ್ನ ನಿಜ ಸ್ಥಿತಿಯ ಅರಿವನ್ನು ಎರಡೇ ಮಾತಿನಲ್ಲಿ ಮುಗಿಸಿ ಸಂದರ್ಶನ ಚೀಟಿಯನ್ನು ಅವರಿಗೆ ಕೊಟ್ಟೆ. ಶ್ರೀ ಶ್ರೀಗಳವರೇ ಅವರಲ್ಲಿ ಮೂಡಿಬಂದು ನನನ್ನು ಸ್ವಾಗತಿಸುತ್ತಿದ್ದರೋ ಎನ್ನುವಂತೆ ಮಂದಸ್ಮಿತರಾಗಿ ಗಾಂಭೀರ್ಯದಿಂದ ಸಂದರ್ಶನ ಚೀಟಿತೆಗೆದುಕೊಂಡು ಓದಿ, ಅಂಚೆ ವಿಳಂಬಕ್ಕೆ ತಾಳೆ ನೋಡಿ, ಅವರೊಂದಿಗೆ ನನ್ನನ್ನು ಕರೆದು ಕೊಂಡು ಹೋಗಿ, ಬಾಗಿಲಿನ ಹತ್ತಿರ ನನ್ನನ್ನು ಒಳಬಡಲು ನಿರಾಕರಿಸಿದ್ದ ಗುಮಾಸ್ತರಿಗೆ

ಇಂದು ಬಂದಿರುವ ಎಲ್ಲಾ ಅಭ್ಯರ್ಥಿಗಳ ಸರತಿ ಮುಗಿದ ನಂತರ ನನ್ನನ್ನು ಒಳಬಿಡುವಂತೆ ಆದೇಶ ನೀಡಿ ಒಳಕ್ಕೆ ಹೋದರು. ಗುಮಾಸ್ತರಿಗೆ ನನ್ನ ಮೇಲೆ ಎಲ್ಲಿಲ್ಲದ ಕೋಪ. ಅವರ ಉರಿಗಟ್ಟಿದ ಮುಖವೇ ಅದಕ್ಕೆ ಸಾಕ್ಷಿಯಾಗಿತ್ತು. ಅಧಿಕಾರಿ ಒಳಗೆ ಹೋಗುವುದೇ ತಡ "ಏನಯ್ಯಾ, ಬೆಂಗಳೂರಿಗೆ ಮೊದಲನೇ ಬಾರಿಗೆ ಬಂದಿರುವುದಾಗಿ ಬೊಗಳಿದೆ, ಆಗಲೇ ಸಿಫಾರಸು" ಎಂದು ಉಗ್ರನೋಟ ಬೀರಿದರು. ಮರು ಮಾತಾಡದೇ ನಾನು ಒಳಸರಿದೆ.

ನನಗೆ ಸಂದರ್ಶನ ಕರೆ ಬಂದಾಗ ಗೋಧೂಳಿಸಮಯ, ಸಂದರ್ಶನದ ನಿರ್ಣಾಯಕರು ಒಬ್ಬ ವಿದೇಶೀಯರೂ ಸೇರಿದಂತೆ ಮೂರು ಮಂದಿ. ಹೆಚ್ಚಾಗಿ ಪ್ರಶ್ನೆ ಕೇಳಿದ್ದು ವಿದೇಶೀಯರು. ಅವರ ಪ್ರಶ್ನೆಗಳಿಗೆಲ್ಲಾ ಲೀಲಾಜಾಲವಾಗಿ ಉತ್ತರಿಸಿದೆ. ಗಣಿತ ಮತ್ತು ವಿಜ್ಞಾನಕ್ಕೆ ಸಂಬಂಧಿಸಿದಂತೆ ಹೆಚ್ಚು ಪ್ರಶ್ನೆ ಕೇಳಿದರು. ನಾನು ಪಟ ಪಟನೇ ಉತ್ತರಿಸುತ್ತಿದ್ದ ರೀತಿ ನೋಡಿ ಅವರಿಗೆ ಆಶ್ಚರ್ಯವಾದಂತೆ ನನಗೆ ವ್ಯಕ್ತವಾಯಿತು. ನನ್ನನ್ನು ಬೆಳಿಗ್ಗೆ ಒಳಬರುವಂತೆ ಆದೇಶ ನೀಡಿದ ಅಧಿಕಾರಿಗಳು "ಸಂದರ್ಶನ ಮುಗಿಯಿತು, ನಾಳೆ ಬಂದು ವೈದ್ಯಕೀಯ ಪರೀಕ್ಷೆ ಮಾಡಿಸಿಕೊಳ್ಳುವಂತೆ ತಿಳಿಸಿದರು. ನಾನು ಅವರಿಗೆ ಕೈ ಮುಗಿದು ಹೊರಡಲುದ್ಯುಕ್ತನಾದಾಗ ವಿದೇಶೀಯರು "ನಿನಗೆ ಹದಿನೆಂಟು ವರ್ಷಗಳು ಸಂದಿವೆಯೇ"? ಎಂದರು ಪೂರ್ಣವಾಗದಿದ್ದಲ್ಲಿ ಸಂದರ್ಶನಕ್ಕೆ ನಾನು ಹೇಗೆ ಅರ್ಹನಾಗುತ್ತಿದ್ದೆ? ಎಂದು ಮರು ಪ್ರಶ್ನೆ ಹಾಕಿದೆ. ನನ್ನದು ಸ್ವಲ್ಪ ಉದ್ಧಟತನವಾಯಿತೆಂದು ಕಾಣುತ್ತದೆ. "ಯು ನಾಟೀ ಬಾಯ್" ಎಂದು ಮೃದುವಾಗಿ ಬೆನ್ನಮೇಲೆ ಹೊಡೆಯುತ್ತಿದ್ದಂತೆಯೇ ಅಲ್ಲಿಗೆ ಚಹಾ ಬಿಸ್ಕತ್ತು ಬಂದಿತು. ನನಗೂ ಅದರ ಸವಿ ಕೊಡಿಸಿಯೇ ಬೀಳ್ಕೊಟ್ಟರು, ಎಷ್ಟು ಜನಕ್ಕೆ ಇಂತಹ ಸುಯೋಗದ ಲಾಭ?

ಸಂದರ್ಶನ ಮುಗಿಯಿತು. ವೈದ್ಯಕೀಯ ಪರೀಕ್ಷೆಯೂ ಮುಗಿಯಿತು. ಮತ್ತು 4-11-63 ರಿಂದ ಕೆಲಸಕ್ಕೆ ಸೇರುವಂತೆ ಆದೇಶವೂ ಬಂತು. ಎಲ್ಲವೂ ಬೆಳ್ಳಿತೆರೆಯ ಮೇಲೆ ಮೂಡುವ ಚಿತ್ರದಂತೆ ಮೂರೇ ದಿವಸಗಳಲ್ಲಿ ಮುಕ್ತಾಯವಾಯಿತು ಶ್ರೀ ಶ್ರೀ ಗಳ ವಾಣಿಯಂತೆ ನನ್ನ ಕಷ್ಟದ ದಿವಸಗಳು ಪರಿಹಾರವಾಗುವ ಕಾಲ ಸನ್ನಿಹಿತವಾಗಿದೆ. ಅವರ ಅಮರವಾಣಿಯು ವಾಣಿಯಾಗುಳಿಯದೆ ಕೈ ಗೂಡಿ ಫಲ ನೀಡುವಂತಾಗಿದೆ. ಅಂದಿನ ಅಮರವಾಣಿ ನನ್ನ ಜೀವನಕ್ಕೆ ಅಮರ ಜ್ಯೋತಿಯಾಗಿ ಬಾಳಿನ ಜ್ಞಾನ ದೀವಿಗೆಯಾಗಿ ಇಂದೂ ಬೆಳಕನ್ನು ನೀಡುತ್ತಿದೆ ಎಂದು ಹೇಳುವುದರಲ್ಲಿ ಯಾವ ಉತ್ಪ್ರೇಕ್ಷೆಯೂ ಇಲ್ಲ.

ನನ್ನ ಅನುಭವದ ಆಳದಲ್ಲಿ ಇದನ್ನು [illegible] ನೋಡಿದಾಗ, ಇದೊಂದು ಪವಾಡ ಶಕ್ತಿ ಎಂದು ನನಗೆ ಮನವರಿಕೆಯಾಗಿದೆ. ಅಂತಹ ಶಕ್ತಿ ಶ್ರೀ ಶ್ರೀಗಳಲ್ಲಿ ಇಲ್ಲದಿದ್ದರೆ, ನಾನು ಅವರ ಆಶ್ರಯ ಪಡೆಯುವ ಅಗತ್ಯವೇ ಇಲ್ಲವೆಂದು ಅವರು ಹೇಗೆ ಅಷ್ಟು ಖಚಿತವಾಗಿ ಹೇಳುತ್ತಿದ್ದರು. ಭವಿಷ್ಯತ್ತಿನ ಬಗ್ಗೆ ನಿಖರವಾಗಿ ಹೇಳಿ ಅವು ನಿಜವೂ ಆಗಿರುವ ನಿದರ್ಶನಗಳು ನಮ್ಮ ಧಾರ್ಮಿಕ ಪರಂಪರೆಯಲ್ಲಿ ಹಾಸುಹೊಕ್ಕಾಗಿವೆ. ಇಂತಹ ನಿತ್ಯಜ್ಞಾನ ಎಲ್ಲರಿಗೂ ಬರುವುದಲ್ಲ, ಯಾರು ಭಗವಂತನ ಸರ್ವಸೃಷ್ಟಿಯನ್ನು ಸಮನಾಗಿ ಕಾಣುವ ಅರಿವಿನ ಅಂತರಾಳವ ಅನುಭವದಿಂದ ಹೊರಬರುವರೋ ಅವರಿಗಲ್ಲದೆ ಅನ್ಯರಿಂದಾಗದು. ಅಂತಹವರನ್ನಲ್ಲದೆ ಎಲ್ಲರನ್ನು ಸ್ವಾಮಿಯೆಂದು ಪೂಜಿಸುವುದಕ್ಕಾಗುವುದೇ?

ನನ್ನಲ್ಲಿಯೇ ಅಡಕವಾಗಿ, ಐಕ್ಯವಾಗಿದ್ದ ಈ ವಿಷಯವನ್ನು ನಾನು ಹೊರಗೆಡದಿದ್ದು ಪೂಜ್ಯ ಗುರುಗಳಾದ ಶ್ರೀ ಟಿ ಆರ್. ಮಹಾದೇವಯ್ಯ ಅವರಲ್ಲಿ. ಅವರ ಮನೆಯಲ್ಲಿ ಶ್ರೀ ಗಳ ವಾಣಿ ಅರ್ಪಿಸಿದ್ದ ಸಂಭಾವನಾ ಗ್ರಂಥ "**ಸಿದ್ಧಗಂಗಾಶ್ರೀ**" ಹೊತ್ತಗೆಯನ್ನು ನೋಡಿದಾಗ, ನನ್ನ ಈ ಅವ್ಯಕ್ತ ವಿಷಯವನ್ನು ವ್ಯಕ್ತವಾಗುವಂತೆ ಮಾಡಲು ನಿಮ್ಮ ಮಾತುಗಳಲ್ಲಿ ಬರೆದು ನನಗೆ ಕಳುಹಿಸಿ ಎಂದು ಆದೇಶವನ್ನು ಇತ್ತರು. ಅದರ ಮೇರೆಗೆ ಈ ನನ್ನ ಅನುಭವವನ್ನು ಅವರಿಗೇ ಅರ್ಪಿಸುತ್ತಿದ್ದೇನೆ.

---

( ಸಂಪಾದಕೀಯದಿಂದ ) 8 ನೇ ಪುಟದಿಂದ

ಜನಿಕ ಪೀಡೆ, ರಾಷ್ಟ್ರೀಯ ವಸ್ತು ನಾಶ- ಇಂಥ ಪ್ರವೃತ್ತಿ ಯಾವ ಸಾಧನೆಗೆ? ವಾಮಮಾರ್ಗದ ಸಾಹಸವಂತೂ ಮಿತಿಮೀರಿದೆ. ಇದರಿಂದ ರಾಷ್ಟ್ರದ ಅಪಾರ ಧನ, ಶಕ್ತಿ, ಶ್ರಮಗಳು ವ್ಯರ್ಥವಾಗುತ್ತವೆ. ಈಗಾಗಲೇ ಅನೇಕ ಕಾರಣಗಳಿಂದ ಜರ್ಜರಿತಗೊಂಡ ರಾಷ್ಟ್ರದ ಪುನರ್ನಿರ್ಮಾಣದ ದೃಢ ಸಂಕಲ್ಪ ಅರ್ಥಪೂರ್ಣವಾಗದೆ ರಾಷ್ಟ್ರದಲ್ಲಿ ಅಸಂಖ್ಯಾತ ಬಡ ಜನರನ್ನು ಸೃಷ್ಟಿಸಿದೆ. ಈ ಸಮಸ್ಯೆ ಕೆಲದಿನಗಳ ನಂತರ ಭೂತಾಕಾರವಾಗಿ ಬೆಳೆದು ರಾಷ್ಟ್ರದಲ್ಲಿ ಎಂದೂ ಇಲ್ಲದ ಅನೇಕ ಜಟಿಲ ಸಮಸ್ಯೆಗಳನ್ನು ಎದುರಿಸುವ ದುರ್ದಿನಗಳು ಬರಬಹುದು. ವಿದ್ಯಾಭ್ಯಾಸ ಜೀವನ ಪವಿತ್ರವಾದದ್ದು, ಆ ಕಾಲದಲ್ಲಿ ವಿದ್ಯಾರ್ಥಿಗಳಲ್ಲಿ ಪವಿತ್ರ ಯೋಚನೆ-ಯೋಜನೆ, ಪವಿತ್ರ ಕ್ರಿಯೆ, ಸಮತೆ, ಧೈರ್ಯ-ಸ್ಥೈರ್ಯಗಳು ಮೊಳಗೊಂಡು ಬೆಳೆದುಬರಬೇಕು. ನಮ್ಮ ರಾಷ್ಟ್ರದ ಹಿಂದಿನ ಸಾವಿರಾರು ವರ್ಷಗಳ ಚರಿತ್ರೆಯ ಪುಟಗಳನ್ನು ತಿರುವಿಹಾಕಬೇಕು. ಅಂದಿನ ನಮ್ಮ ಹಿರಿಯರು ತಾವು ಮಾಡಿದ ತಪ್ಪಿನಿಂದ ತಾವು ಉಂಡ ಕಹಿ ಫಲಗಳನ್ನು ಗುರುತಿಸಬೇಕು. ಅಂಥ ದುರ್ದಿನಗಳು ನಮಗೊದಗಬಾರದಂತೆ ನೋಡಿಕೊಂಡು ಮುಂದಿನ ನಮ್ಮ ರಾಷ್ಟ್ರದ ಭವ್ಯ ಭವಿಷ್ಯಕ್ಕಾಗಿ ಅಣಿಗೊಳ್ಳುವ ಸತ್ಸಂಕಲ್ಪಭರಿತರಾಗಬೇಕು, ಆಗಲೇ ಜೀವಿತಕ್ಕಮೂಲ್ಯ, ಇಲ್ಲದಿದ್ದರೆ ಭವಿಷ್ಯ ಭಯಾನಕವೆಂಬುದಂತೂ ಸತಸ್ಯ ಸತ್ಯ.

—ದೊಡ್ಡ ಬಾಣಗೆರೆ ಪ್ರಕಾಶಮೂರ್ತಿ

ಧಾರ್ಮಿಕ ಚೇತನ
ದೈವಸಿರಿಯ ನೆಲೆ
ಸಂಸ್ಕೃತಿ ವಿದ್ಯೆಯ
ಸಮೃದ್ಧಿಯ ಕಲೆ
ಪುರಾತನ ಚರಿತೆಯ
ಪುಣ್ಯ ಸಿರಿಯ ಬೆಲೆ
ಪರಮ ಪವಿತ್ರದ ಘನನಾಡು
ವರ ಕಲುನಾಡಿನ ಹಿರಿನಾಡು
ಸಿದ್ಧಗಂಗಾಂಬಿಕೆಯ ದಿವ್ಯಗೂಡು
ಸಿದ್ಧಲಿಂಗೇಶನಿಹ ಭವ್ಯ ಬೀಡು.

ಅನ್ನವಿದ್ಯೆಗಳ ಅಪಾರ ದಾನವ
ಸಿದ್ಧಿಸಿ ನೀಡುವ ಅಪೂರ್ವ ಕ್ಷೇತ್ರ
"ಸಿದ್ಧಗಂಗಾ" ನಾಮದಿ ಬೆಳಗುವ
ಶಕ್ತಿ ಮಹತ್ತಿನ ಸುಂದರ ಕ್ಷೇತ್ರ
ವಿದ್ಯಾದಾನಕೆ ಮೈತಾಳಿಹ ಗುರು
ಶಿವಕುಮಾರರು ಸೃಜಿಸಿಹ ಕ್ಷೇತ್ರ.

ಹುಣ್ಣಿಮೆ ಹಿಮಕರನಂತೆಯೆ ಬೆಳಗುತ
ಭಕ್ತರ ಮನಕಾನಂದವ ಬೀರುವ
ಶರಣಗಣ ಪ್ರಿಯ ಮಹಾಕ್ಷೇತ್ರ
ಸೆಳೆವುದು ಸರ್ವರ ಮನನೇತ್ರ
ತುಮಕೂರ್ ಜಿಲ್ಲೆಯ ಹೆಮ್ಮೆಯ ಕ್ಷೇತ್ರ
ಪರಮ ತಪೋವನ ಪುಣ್ಯ ಕ್ಷೇತ್ರ.



# ಶ್ರೀ ಉದ್ದಾನೇಶ್ವರ ಶತಕ

—ಜೆ. ವಿ. ರಾಜಶೇಖರಯ್ಯ

ನಿನ್ನನಾಮವೆ ನಾದವಾಗಿದೆ
ನಿನ್ನ ರೂಪವೇ ಬಿಂದುವೆನಿಸಿದೆ
ನಿನ್ನ ಕ್ರಿಯೆಯೆ ಕಳೆಯು ಎನಿಸೊಳ ಹೊರಗೆ ಬೆಳಗುತಿದ್ದೆ।
ನಿನ್ನ ಸುಳಿದೇನೇನು ಕಾಣದ
ಲಿನ್ನು ಮೌನದಿ ಕುಳಿತೆ ಕೈ ಬಿಡ
ದಿನ್ನು ತವಕದೆ ಪಾಲಿಪುದುದ್ದಾನೇಶ ದಯವಾಗೈ ॥೯॥

ಧರೆಯ ಷೋಡಶದಾನದಾಸೆಯ
ಹರಿಸಲಾರದು ಸಾಕು ಎನಿಸದು
ಮೆರೆವ ಹಸಿವಿನೊಳನ್ನ ಕಬಳದಿ ತೃಪ್ತಿಯಳವಟ್ಟು।
ಧರಿಸಿ ಶಾಂತಿಯನಿನ್ನು ಸಾಕೆಂ
ದೊರೆವನದರಿಂದನ್ನ ದಾನವೆ
ಪರಮ ದಾನವಿದೆಂದ ಉದ್ದಾನೇಶ ದಯವಾಗೈ ॥೧೦॥

ಹಸಿವಿನಾರೋಗಕ್ಕೆ ನೋಡುವ
ಡಶನ ವೌಷಧವೆಂದು ತಿಳಿದಂ
ತೆಸೆವ ದಾಸೋಹವನು ನಡೆಸುತೆ ಬಹುಭವಂಗಳಿಗೆ।
ಹುಸಿಯ ವಿದ್ಯೆಯ ಮೂಲವೆಂದದ
ನಶಿಸಿ ವಿದ್ಯಾನಿಲಯ ಗುರುಕುಲ
ವೆಸಗಿದಾರ್ಯನೆ ಜೀಯ ಉದ್ದಾನೇಶ ದಯವಾಗೈ ॥೧೧॥

ತರಳ ತಾಯ್ತಂದೆಗಳು ಮಿತ್ರರು
ತರುಣಿ ಬಿಯಗರು ಧನವು ಕನಕವು
ಸಿರಿಯು ಭೂ ಗೃಹಪಶುಗಳೆಂಬಿವು ಭವಕೆ ಸೆಳೆಯುವವು।
ಅರಿಯೆ ಸಂಸ್ಕೃತಿಯನ್ನು ತಪ್ಪಿಸಿ
ಪೊರೆವ ನೀ ಗುರುತಂದೆಯೊಬ್ಬನೆ
ವರ ಕೃಪಾಕರ ಜೀಯ ಉದ್ದಾನೇಶ ದಯವಾಗೈ ॥೧೨॥

(ಮುಂದುವರಿಯುತ್ತದೆ)

(9 ನೇ ಪುಟದಿಂದ ಚಿಂತನ)

ಪ್ರಸ್ತುತ ಪ್ರಶ್ನೆಯಿಷ್ಟು: ಮಾನವನು ಈ ದೈವೀಗುಣಗಳೆಲ್ಲ ತನ್ನವೆಂದು ತಿಳಿದು, ಅವುಗಳನ್ನು ಅಳವಡಿಸಿಕೊಂಡು ಬಾಳಿ ಬೆಳಗಬೇಕೆ ಇಲ್ಲವೆ ಅವು ದೇವರ ಗುಣಗಳೆಂದು ದೇವರ ತಲೆಗೆ ಕಟ್ಟಿ ಬಿಡಬೇಕೆ? ನಿಜವಾಗಿ ನೋಡಿದರೆ ನಾವು ದೈವಿ ಗುಣಗಳೆಂದು ಕರೆಯುವ ಗುಣಗಳೆಲ್ಲ ಮನುಷ್ಯ ಮಾತ್ರ್ರರ ಗುಣಗಳೇ. ಜೀವನಿಗೆ ಮಾನವತ್ವ ಬರುವುದು ಇವುಗಳ ಅನುಸಂಧಾನ, ಅನುಷ್ಠಾನಗಳಿಂದ. ಇವುಗಳನ್ನೇ ದೇವರ ತಲೆಗೆ ಕಟ್ಟಿಬಿಟ್ಟರೆ ನಮಗುಳಿಯುವುದೇನು? ಡಂಬ ದರ್ಪಾದಿ ಆಸುರೀ ಗುಣಗಳು ಮಾತ್ರ.

ಆದುದರಿಂದ ನಮ್ಮವಾಗಿರುವ ಈ ಗುಣಗಳು ಮತ್ತೆ ನಮ್ಮವಾಗಬೇಕು. ಅವುಗಳನ್ನು ದೇವರ ನಾಮಾವಳಿಯಲ್ಲಿ ಸೇರಿಸಿ ಅವುಗಳ ಅಂಧಪಠನ ಮಾಡುವುದು ಅಂಧ ತಮಸ್ಸಿನಲ್ಲಿ ಅಲೆದಾಡಿದಂತೆ. ಈ ಗುಣಗಳು ನಮ್ಮವಾದರೆ ನಮ್ಮಲ್ಲಿಯೇ ದೈವತ್ವದ ಆವಿರ್ಭಾವ. 'ಓಂ ದೇವಾಯ ಜನ್ಮನೇ' ಎಂಬ ಪ್ರಾರ್ಥನೆಗೆ ಆಗ ಸಾರ್ಥಕತೆ. ದೇವನ ಸರ್ವಜ್ಞತ್ವ, ಸರ್ವಕರ್ತೃತ್ವ, ಸರ್ವವ್ಯಾಪಿತ್ವಾದಿ ಗುಣಗಳಲ್ಲಿ, ಶಾಂತಿ, ಸತ್ಯ, ಪ್ರೇಮ, ಕರುಣೆ ಮೊದಲಾದ ಗುಣಗಳು ಮಾನವನ ಗುಣಗಳಾಗುವುದು ಸಾಧ್ಯ. ಇವು ನಮ್ಮವಾದರೆ ಈ ದೈವೀ ಸಂಪತ್ತಿನಿಂದ ನಮ್ಮಲ್ಲಿಯೂ ದೇವತ್ವದ ದೀಪ್ತಿ ಬೆಳಗೀತು. ಈ ಅರ್ಥದಲ್ಲಿ ಜೀವಿ ದೇವನಾಗುವನೆಂಬ ಮಾತು ಮಾನ್ಯ ನನಗೆ.

ಜೀವಿ ದೇವನಾಗಲಿ ಬಿಡಲಿ, ಈ ದಿವ್ಯಗುಣಗಳನ್ನು ಶೋಧಿಸಿ ಸಾಧಿಸಿಕೊಂಡರೆ ಸಾಕು--ಮಾನವ ಜೀವನ ಮಹೋನ್ನತಿಯನ್ನು ಪಡೆಯುತ್ತದೆ; ಮಾನವ ಸಮಾಜ ಮಂಗಲಮಯವಾಗುತ್ತದೆ; ಮಾನವಲೋಕಕ್ಕೆ ಮಹತ್ವ ಬರುತ್ತದೆ. ●

(ಕೃಪೆ: 'ಬಸವ ಪಥ')

---

ಹಾವಿನ ಹೆಡೆಗಳ ಕೊಂಡು ಕೆನ್ನೆಯ ತುರಿಸಿಕೊಂಡಂತೆ
ಉರಿವ ಕೊಳ್ಳಿಯಕೊಂಡು ಮಂಡೆಯ ಸಿಕ್ಕಿಬಿಡಿಸುವಂತೆ
ಹುಲಿಯ ಮೀಸೆಯ ಹಿಡಿದುಕೊಂಡು ಒರೆದುಯ್ಯಲನಾಡುವಂತೆ
ಕೂಡಲ ಸಂಗನ ಶರಣರೊಡನೆ ಸರಸವಾಡಿದರೆ
ಸುಣ್ಣದ ಕಲ್ಲ ಮಡಿಲಲ್ಲಿ ಕಟ್ಟಿಕೊಂಡು ಮಡುವ ಬಿದ್ದಂತೆ.

---

LICENCED TO POST WITHOUT PRE PAYMENT LICENCE NO. 3
SIDDAGANGA MONTHLY Reg. No. KRN Q-9



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ದಗಂಗಾ ಮಠ